

# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*



Vol-14 November - 2017 Issue No. 10 ₹ 10/-



"Fondation Day" was Organised All over the Country on 7th November 2017 as "Flag Day" Dr. K.K. Khandelwal, IAS, CNC, BS&G Called on VicePresident of India Sri M. Venkaiah Naidu and Presented a Flag to him. Sri R. Krishnaswamy, Director and Miss Suman Lata, Joint Director(SS) and Rover-Ranger were part of this delegation.



ri P.G.R. Sindhia, SCC Called on Hon'ble Governor of Karnataka & Patron of BS&G ri Vajubai Vala on 7th November 2017 at ajbhavan as part of "Foundation Day Flag" elease Programme. Seen with the Governor are r. Mahesh Joshi, Sri D. Venkatesh, Miss Krupa ijay, Sri Vishalaksha, Scouts-Guides and overs-Rangers.



Sri P.G.R. Sindhia, State Chief Commissioner Called on Dr. Kiran Mujumdar Shaw, Chairman & Managing Director of BIOCON on 7th November 2017 and presented "Foundation Day Flag" to her. Dr. Mahesh Joshi, Sri Vishalaksha and Sri A.S. Madhusudhan were present

**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆ 7ನೇ ನವೆಂಬರ್ 2017 ರಂದು ಏರ್ಪಡಿಸಿದ "ಸಂಸ್ಥಾಪನಾ ದಿನಾಚರಣೆ ಮತ್ತು ಧ್ವಜ ಬಿಡುಗಡೆ" ಸಮಾರಂಭದಲ್ಲಿ ರಾಜ್ಯ ಸರ್ಕಾರದ ಸನ್ಮಾನ್ಯ ಸಚಿವರುಗಳನ್ನು ಭೇಟಿಮಾಡಿ ಅವರುಗಳ ಮುಖೇನ ಧ್ವಜ ಚೀಟಿಗಳನ್ನು ಬಿಡುಗಡೆಗೊಳಿಸಿದ ಸಂದರ್ಭದ ಚಿತ್ರಗಳು**



ಮಾನ್ಯ ಗೃಹ ಸಚಿವ ಶ್ರೀ ರಾಮಲಿಂಗಾರೆಡ್ಡಿ ಅವರೊಂದಿಗೆ ಶ್ರೀಮತಿ ಗೀತಾ ನಟರಾಜ್, ಶ್ರೀ ಎಂ. ಪ್ರಭಾಕರ್‌ಭಟ್ ಹಾಗೂ ಶ್ರೀ ಕೆ.ಹೆಚ್. ಜಯರಾಮಯ್ಯ



ಮಾನ್ಯ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಶ್ರೀ ಟಿ.ಬಿ. ಜಯಚಂದ್ರ ಅವರೊಂದಿಗೆ ಶ್ರೀಯುತರುಗಳಾದ ಎಂ.ಎ. ಖಾಲಿದ್, ಪ್ರಭುದೇವ ಜೆ. ಚಿಗಟೇರಿ, ಕೆ.ಹೆಚ್. ಜಯರಾಮಯ್ಯ, ಶ್ರೀಮತಿಯವರಾದ ಬಿ.ಡಿ. ಶಾಂತ, ಜಾನಕಿ ವೇಣುಗೋಪಾಲ್, ರಾಧ ವೆಂಕಟೇಶ್.



ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರಾದ ಶ್ರೀ ತನ್ವೀರ್ ಸೇಠ್ ಅವರೊಂದಿಗೆ ಇಲಾಖೆಯ ಪ್ರಧಾನ ಕಾರ್ಯದರ್ಶಿ ಶ್ರೀಮತಿ ಶಾಲಿನಿ ರಜನೀಶ್, ಶ್ರೀಮತಿ ಗೀತಾ ನಟರಾಜ್, ಶ್ರೀ ಎಂ. ಪ್ರಭಾಕರ್‌ಭಟ್, ಶ್ರೀ ಕೆ.ಹೆಚ್. ಜಯರಾಮಯ್ಯ.



ಮಾನ್ಯ ಬೆಂಗಳೂರು ನಗರಾಭಿವೃದ್ಧಿ ಸಚಿವರಾದ ಶ್ರೀ ಕೆ.ಜೆ. ಜಾರ್ಜ್ ಅವರೊಂದಿಗೆ ಶ್ರೀ ಎಂ.ಎ. ಖಾಲಿದ್, ಶ್ರೀ ಪ್ರಭುದೇವ ಜೆ. ಚಿಗಟೇರಿ, ಶ್ರೀಮತಿ ರಾಧ ವೆಂಕಟೇಶ್



ಮಾನ್ಯ ನಗರಾಭಿವೃದ್ಧಿ ಹಾಗೂ ಹಜ್ ಸಚಿವರಾದ ಶ್ರೀ ಆರ್. ರೋಷನ್‌ಬೇಗ್ ಅವರೊಂದಿಗೆ ಶ್ರೀಮತಿ ಗೀತಾ ನಟರಾಜ್, ಶ್ರೀ ಎಂ. ಪ್ರಭಾಕರ್‌ಭಟ್



ಮಾನ್ಯ ಆಹಾರ ಮತ್ತು ನಾಗರೀಕ ಸರಬರಾಜು ಸಚಿವರಾದ ಶ್ರೀ ಯು.ಟಿ. ಖಾದರ್ ಅವರೊಂದಿಗೆ ಶ್ರೀಮತಿ ಗೀತಾ ನಟರಾಜ್, ಶ್ರೀ ಎಂ. ಪ್ರಭಾಕರ್‌ಭಟ್, ಶ್ರೀ ಕೆ.ಹೆಚ್. ಜಯರಾಮಯ್ಯ

**The Bharat Scouts & Guides, Karnataka Organised "Foundation Day Flag Sticker" Release Programme on 7th November 2017 by Rev. Archbishiop of Bengaluru Hon'ble Member of Parliament, Worshipful Mayor of BBMP Distinguished Freedom Fighter and Literary Person at Bengaluru.**



ಪೂಜ್ಯ ಮಹಾಪೌರರಾದ ಶ್ರೀ ಆರ್. ಸಂಪತ್‌ರಾಜ್ ಹಾಗೂ ಬೆಂಗಳೂರಿನ ಕೇಂದ್ರ ಸಂಸದ ಶ್ರೀ ಪಿ.ಸಿ.ಮೋಹನ್, ಉಪಮೇಯರ್ ಶ್ರೀಮತಿ ಪದ್ಮಾವತಿ ನರಸಿಂಹಮೂರ್ತಿ, ಶ್ರೀ ಎಂ.ಎ.ಚೆಲ್ಲಯ್ಯ ಹಾಗೂ ಗೈಡ್ಸ್‌ಗಳಿದ್ದಾರೆ.



ಬೆಂಗಳೂರಿನ ಆರ್ಚ್ ಬಿಷಪ್ ರೆವರೆಂಡ್ ಡಾ॥ ಬರ್ನಾಡ್ ಮೊರಾಸ್ ಅವರೊಂದಿಗೆ ಶ್ರೀ ಪಿ.ಜಿ.ಆರ್. ಸಿಂಧ್ಯ, ಶ್ರೀ ಡಿ. ವೆಂಕಟೇಶ್, ಶ್ರೀಮತಿ ಕೃಪಾವಿಜಯ್ ಮತ್ತು ಶ್ರೀ ವಿಶಾಲಾಕ್ಷ.







ಸ್ವಾತಂತ್ರ್ಯ ಹೋರಾಟಗಾರರಾದ ಶ್ರೀ ಹೆಚ್.ಎಸ್. ದೊರೆಸ್ವಾಮಿ ಹಾಗೂ ಜಾನಪದ ತಜ್ಞ ಡಾ॥ ಗೊ.ರು.ಚನ್ನಬಸಪ್ಪ ಅವರೊಂದಿಗೆ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಶ್ರೀ ಎನ್. ಶ್ರೀನಿವಾಸನ್, ಶ್ರೀಮತಿ ಬಿ.ವಿ. ರಾಮಲತಾ, ಶ್ರೀ ವಿ. ತಿಪ್ಪೇಸ್ವಾಮಿ, ಮತ್ತು ರೋವರ್–ರೇಂಜರ್‌ಗಳನ್ನು ಕಾಣಬಹುದು.





ಬೆಂಗಳೂರು ವಿಶ್ವವಿದ್ಯಾಲಯ ಪ್ರಭಾರಿ ಉಪಕುಲಪತಿ ಡಾ॥ ಹೆಚ್.ಎನ್. ರಮೇಶ್ ಅವರೊಂದಿಗೆ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಶ್ರೀ ಎನ್. ಶ್ರೀನಿವಾಸನ್, ಶ್ರೀ ಎಂ. ಪ್ರಭಾಕರ್‌ಭಟ್, ಶ್ರೀ ಕೆ.ಹೆಚ್. ಜಯರಾಮಯ್ಯ.



ಎ.ಪಿ.ಎಸ್. ಕಾಲೇಜಿನ ಅಧ್ಯಕ್ಷರಾದ ಶ್ರೀ ಟಿ.ವಿ. ಮಾರುತಿ ಅವರೊಂದಿಗೆ ಡಾ॥ ಮಹೇಶ್ ಜೋಶಿ, ಶ್ರೀ ಪಿ.ಜಿ.ಆರ್. ಸಿಂದ್ಯ, ಶ್ರೀ ಡಿ. ವೆಂಕಟೇಶ್, ಶ್ರೀಮತಿ ಉಮಾ ನಾಗೇಶ್, ಕು. ಕೃಪಾ ವಿಜಯ್ ಹಾಗೂ ಗೈಡ್ಸ್‌ಗಳನ್ನು ಕಾಣಬಹುದು.

## The Bharat Scouts & Guides, Karnataka Organised "Foundation Day Flag Sticker" Release Programme at Vidhana Soudha & Vikas Soudha on 7th November 2017 through The Chief Secretary, Additional Chief Secretary and Principal Secretaries of State Govt.,



ದೂರದರ್ಶನದ ದಕ್ಷಿಣ ವಲಯದ ನಿವೃತ್ತ ಅಡಿಷನಲ್ ಡೈರೆಕ್ಟರ್ ಜನರಲ್ ಡಾ॥ ಮಹೇಶ್ ಜೋಷಿಯೊಂದಿಗೆ ಶ್ರೀ ಪಿ.ಜಿ.ಆರ್. ಸಿಂಧ್ಯ, ಶ್ರೀಮತಿ ಗೀತಾನಟರಾಜ್, ಶ್ರೀ ಆರ್. ವಿಶಾಲಾಕ್ಷ ಹಾಗು ರಾಜ್ಯ ಸಂಸ್ಥೆ ಪದಾಧಿಕಾರಿಗಳು ಹಾಗು ರೋವರ್ಸ್/ರೇಂಜರ್ಸ್‌ಗಳು.



.ಸಂಸ್ಥೆಯ ಮಾಜಿ ರಾಜ್ಯ ಕಾರ್ಯದರ್ಶಿಗಳು ಹಾಗೂ ನಿವೃತ್ತ ಭಾರತೀಯ ಆಡಳಿತ ಸೇವೆ ಅಧಿಕಾರಿಗಳಾದ ಶ್ರೀ ಸಿದ್ದಯ್ಯನವರವರೊಂದಿಗೆ ಶ್ರೀಯುತರಾದ ಎಂ.ಎ. ಖಾಲಿದ್, ಪ್ರಭುದೇವ ಜೆ. ಚಿಗಟೇರಿ ಶ್ರೀಮತಿಯರಾದ ಗೀತಾ ನಟರಾಜ್, ಜಾನಕಿ ವೇಣುಗೋಪಾಲ್ ರಾಧಾವೆಂಕಟೇಶ್ ಹಾಗೂ ರೋವರ್ಸ್-ರೇಂಜರ್ಸ್‌ಗಳು.



.ಸರ್ಕಾರದ ಮುಖ್ಯ ಕಾರ್ಯದರ್ಶಿ ಶ್ರೀ ಸುಭಾಷ್‌ಚಂದ್ರ ಕುಂಟಿಯಾ ಅವರೊಂದಿಗೆ ಶ್ರೀ ಚಿನ್ನಸ್ವಾಮಿರೆಡ್ಡಿ, ಶ್ರೀಮತಿ ಗೀತಾನಟರಾಜ್ ಶ್ರೀಮತಿ ಬಿ.ವಿ.ರಾಮಲತಾ, ಶ್ರೀ ಎಂ.ಪ್ರಭಾಕರ್‌ಭಟ್.



ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗು ರಾಜ್ಯ ಸಂಸ್ಥೆ ಉಪಾಧ್ಯಕ್ಷಿಣೆ ಡಾ॥ ಕೆ. ರತ್ನಪ್ರಭರೊಂದಿಗೆ ಶ್ರೀಮತಿ ಗೀತಾನಟರಾಜ್, ಶ್ರೀ ಸಿ.ಎಸ್. ರೆಡ್ಡಿ, ಶ್ರೀಮತಿ ಬಿ.ವಿ.ರಾಮಲತಾ ಮತ್ತು ಶ್ರೀ ಕೆ.ಹೆಚ್. ಜಯರಾಮಯ್ಯ.



ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳಾದ ಶ್ರೀ ಡಿ.ವಿ. ಪ್ರಸಾದ್ ಅವರೊಂದಿಗೆ ಶ್ರೀಮತಿ ಗೀತಾ ನಟರಾಜ್, ಶ್ರೀ ಎಂ. ಪ್ರಭಾಕರ್ ಭಟ್ ಮತ್ತು ಶ್ರೀ ಕೆ. ಹೆಚ್. ಜಯರಾಮಯ್ಯ



ಪ್ರಾಥಮಿಕ ಹಾಗು ಪ್ರೌಢ ಶಿಕ್ಷಣ ಇಲಾಖೆ ಪ್ರಧಾನ ಕಾರ್ಯದರ್ಶಿಗಳಾದ ಡಾ॥ ಶಾಲಿನಿ ರಜನೀಶ್‌ರೊಂದಿಗೆ ಶ್ರೀಮತಿ ಗೀತಾನಟರಾಜ್, ಶ್ರೀ ಪ್ರಭುದೇವ ಜೆ. ಚಿಗಟೇರಿ, ಶ್ರೀಮತಿ ಬಿ.ಡಿ.ಶಾಂತ, ಶ್ರೀಮತಿ ಜಾನಕಿ ವೇಣುಗೋಪಾಲ್ ಹಾಗು ರೋವರ್-ರೇಂಜರ್.

ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*



## ಪರಿವಿಡಿ



ಸಂಚಿಕೆಯ ವಾರ್ಷಿಕ ಚಂದಾ ರೂ. 100/-

ವಿದ್ಯಾಸಂಸ್ಥೆ ಹಾಗೂ ಸಂಘ-ಸಂಸ್ಥೆಗಳಿಗೆ ವಾರ್ಷಿಕ ಚಂದಾ ರೂ.100/- ಚಂದಾಹಣವನ್ನು ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ #39 ಅರಮನೆ ರಸ್ತೆ, ಬೆಂಗಳೂರು-560 001 ಇಲ್ಲಿಗೆ ಕಳುಹಿಸಲು ಕೋರಿದೆ.
ದೂ: 080-2226 0017, 2226 7470

ನಮ್ಮ ಸಂಸ್ಥೆಯ ವೆಬ್‌ಸೈಟ್:
www.bsgkarnataka.org
ನಮ್ಮ ಸಂಸ್ಥೆಯ ಫೇಸ್‌ಬುಕ್:
The Bharat Scout-Guide, Karnataka



# ರಾಜ್ಯ ಮುಖ್ಯ ಆಯುಕ್ತರ ನುಡಿ

**ನನ್ನ ಪ್ರೀತಿಯ ಸ್ಕೌಟ್ಸ್ ಮತ್ತು ಗೈಡ್ಸ್ ಗೆಳೆಯರೇ,**
**ಸಸ್ನೇಹ ನಮಸ್ಕಾರಗಳು**

ನಿಮಗೆಲ್ಲಾ ಧ್ವಜ ದಿನಾಚರಣೆಯ ಶುಭಾಶಯಗಳು. 1950ರ ನವೆಂಬರ್ 7ರಂದು ಭಾರತದಲ್ಲಿ ಏಕೀಕೃತವಾದ "ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ"ಯು ಆರಂಭವಾಯಿತು. ಅಂದಿನಿಂದ ನವೆಂಬರ್ 7ರಂದು ನಾವು "ಸ್ಥಾಪನಾದಿನ"ವನ್ನು "ಧ್ವಜದಿನಾಚರಣೆ"ಯನ್ನಾಗಿ ಆಚರಿಸುತ್ತಿದ್ದೇವೆ. ದೇಶದ ಎಲ್ಲಾ ಪ್ರಮುಖ ನಾಗರೀಕರಿಗೆ ನಮ್ಮ ಧ್ವಜಗಳನ್ನು ನೀಡಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಬಗ್ಗೆ ಜಾಗೃತಿಯನ್ನು ಉಂಟುಮಾಡುತ್ತಿದ್ದೇವೆ. ಕರ್ನಾಟಕದಲ್ಲಿ ಎಲ್ಲಾ ಜಿಲ್ಲೆಗಳಲ್ಲಿ "ಧ್ವಜ ದಿನಾಚರಣೆ"ಯನ್ನು ಬಹಳ ಸಡಗರದಿಂದ ಆಚರಿಸಲಾಗಿದೆ.

ಹಲವಾರು ಜಿಲ್ಲೆಗಳಲ್ಲಿ ಮೂಲ ತರಬೇತಿ ಶಿಬಿರಗಳು ಆರಂಭವಾಗಿವೆ. ಶಿಬಿರಗಳಲ್ಲಿ ಭಾಗವಹಿಸುವ ಅಧ್ಯಾಪಕರುಗಳು ಸಂಘಟನೆಯಲ್ಲಿ ಮನಃಪೂರ್ವಕವಾಗಿ, ಕ್ರಿಯಾಶೀಲವಾಗಿ ಭಾಗವಹಿಸುವಂತೆ ಉತ್ತೇಜಿಸಬೇಕಾದ ಜವಾಬ್ದಾರಿಯು ಎಲ್ಲಾ ಜಿಲ್ಲಾ ಘಟಕಗಳದ್ದಾಗಿದೆ.

"ಕರ್ನಾಟಕ ದರ್ಶನ" ಮೂರನೆಯ ವರ್ಷಕ್ಕೆ ಕಾಲಿಟ್ಟಿದೆ. ವರ್ಷದಿಂದ ವರ್ಷಕ್ಕೆ ಹೆಚ್ಚು ಮಕ್ಕಳು ಪ್ರವಾಸದಲ್ಲಿ ಭಾಗವಹಿಸುತ್ತಿದ್ದಾರೆ. ಈ ಬಾರಿ ಜನಗಣತಿಯ ಅನುಗುಣವಾಗಿ ಜಿಲ್ಲೆಗಳಿಗೆ ಅನುದಾನವನ್ನು ಬಿಡುಗಡೆ ಮಾಡಲಾಗಿದೆ. ನಾಡಿನ ಪ್ರೇಕ್ಷಣೀಯ ಸ್ಥಳಗಳಿಗೆ ಭೇಟಿ ನೀಡುವುದರ ಜೊತೆಗೆ ಮಕ್ಕಳಿಗೆ ಕರ್ನಾಟಕದ ಜನಜೀವನದ ಪರಿಚಯವನ್ನು "ಕರ್ನಾಟಕ ದರ್ಶನ" ಮಾಡುತ್ತಿದೆ. ಮಕ್ಕಳು ಒಟ್ಟಾಗಿ ಆಡುವುದು, ಊಟಮಾಡುವುದು, ಮನರಂಜನಾ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದು, ಮುಂತಾದ ಚಟುವಟಿಕೆಗಳು ಅವರಿಗೆ ಬಾಲ್ಯದಲ್ಲಿಯೇ ಸಹಜೀವನದ ಪಾಠವನ್ನು ಕಲಿಸುತ್ತದೆ. ಭಾಷೆ, ಧರ್ಮ, ಜಾತಿಗಳ ಮೇರೆಯನ್ನು ಮೀರಿದಂತಹ ಮಾನವತೆಯನ್ನು ಹಾಗೂ "ನಾವೆಲ್ಲರೂ ಸಮಾನರು" ಎಂಬ ಪಾಠವನ್ನು ಕರ್ನಾಟಕ ದರ್ಶನವು ಮಕ್ಕಳಲ್ಲಿ ರಕ್ತಗತ ಮಾಡುವುದು ಕಾರ್ಯಕ್ರಮದ ಯಶಸ್ಸಿನ ಸಾಕ್ಷಿಯಾಗುತ್ತದೆ.

ಕಳೆದ ತಿಂಗಳ 31ರಂದು ನಾವು ಸದ್ಭಾವನಾ ಮತ್ತು ಏಕತಾ ದಿನವನ್ನು ಆಚರಿಸಿದ್ದೇವೆ. ಈ ತಿಂಗಳ 14ರಂದು ಮಕ್ಕಳ ದಿನಾಚರಣೆಯನ್ನು ಆಚರಿಸಿದ್ದೇವೆ. ಈ ಆಚರಣೆಗಳು ಕೇವಲ ಸಾಂಪ್ರದಾಯಕವಾಗಿ ಭಾಷಣ, ಮನರಂಜನೆಗೆ ಸೀಮಿತಗೊಳ್ಳದೆ, ಅದಕ್ಕಿಂತ ಹೆಚ್ಚಿನದನ್ನು ಸಾಧಿಸಬೇಕು. ದಿನಾಚರಣೆಗಳಿಗೆ ಸಂಬಂಧಿಸಿದ ಮಹಾ ವ್ಯಕ್ತಿಗಳ ಬದುಕು ಮತ್ತು ಆದರ್ಶಗಳು ಮಕ್ಕಳ ಬದುಕಿನಲ್ಲಿ ಒಡಮೂಡುವ ರೀತಿಯಲ್ಲಿ ಚಟುವಟಿಕೆಯನ್ನು ನಾವು ರೂಪಿಸಬೇಕು. ಆಗಲೇ ಈ ಆಚರಣೆಗಳು ಅರ್ಥವನ್ನು ಪಡೆದುಕೊಳ್ಳುತ್ತವೆ.

ಕೋಲಾರ ಜಿಲ್ಲೆಯವರು ನಡೆಸಿದ "ಕೆರೆ ಅಪ್ಪಿಕೊ" ಕಾರ್ಯಕ್ರಮವು ನನ್ನ ಗಮನವನ್ನು ಸೆಳೆಯಿತು. ನೀರನ್ನು ಸ್ವಚ್ಛವಾಗಿ ಉಳಿಸಿಕೊಳ್ಳುವ ಅಭ್ಯಾಸವನ್ನು ಮಕ್ಕಳಲ್ಲಿ ಬೆಳೆಸುವ ಈ ರೀತಿಯ ವಿನೂತನ ಕಾರ್ಯಕ್ರಮಗಳು ಅಭಿನಂದನೀಯ.

ಗೀತ ಗಾಯನ ಸ್ಪರ್ಧೆಯು ಬಹುತೇಕ ಜಿಲ್ಲೆಗಳಲ್ಲಿ ನಡೆದಿರುವುದು ಸಂತೋಷದ ವಿಷಯ. ಸದ್ಯದಲ್ಲಿಯೇ ರಾಜ್ಯ ಮಟ್ಟದ ಸ್ಪರ್ಧೆಗಳು ನಡೆಯುತ್ತವೆ. ಜಿಲ್ಲಾ ಮಟ್ಟದಲ್ಲಿ ಗೆದ್ದಿರುವ ಅಭ್ಯರ್ಥಿಗಳು ರಾಜ್ಯ ಮಟ್ಟದ ಸ್ಪರ್ಧೆಗೆ ಸಿದ್ಧವಾಗಬೇಕು. 2016-17ರಲ್ಲಿ ಎಸ್‌ಎಸ್‌ಎಲ್‌ಸಿ ಪರೀಕ್ಷೆಗಳಲ್ಲಿ ಉತ್ತಮ ಅಂಕಗಳನ್ನು ಗಳಿಸಿದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಸನ್ಮಾನ ಸಮಾರಂಭವು ಡಿಸೆಂಬರ್ 10 ಮತ್ತು 11ರಂದು ಬೆಂಗಳೂರಿನಲ್ಲಿ ಆಯೋಜಿಸಲಾಗಿದೆ.

ಕರ್ನಾಟಕದಲ್ಲಿ ನಮ್ಮ ಸಂಸ್ಥೆಯನ್ನು ಬೆಳೆಸುವುದರಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದ ಶ್ರೀ ಕೊಂಡಜ್ಜಿ ಬಸಪ್ಪರವರ ಜನ್ಮಶತಮಾನದ ಸಮಾರೋಪ ಸಮಾರಂಭವು ಡಿಸೆಂಬರ್ 11ರಂದು ಬೆಂಗಳೂರಿನಲ್ಲಿ ನಡೆಯಲಿದೆ. ಕಳೆದ ಎರಡು ವರ್ಷಗಳಲ್ಲಿ ಶ್ರೀ ಕೊಂಡಜ್ಜಿ ಬಸಪ್ಪರವರ ಜನ್ಮಶತಮಾನೋತ್ಸವವನ್ನು ಆಚರಿಸುವುದರ ಮೂಲಕ ನಾವು ಸಂಸ್ಥೆಯ ಬೇರುಗಳನ್ನು ಭದ್ರಪಡಿಸುವ ಪ್ರಯತ್ನವನ್ನು ಮಾಡಿದ್ದೇವೆ.

ಡಿಸೆಂಬರ್‌ನಲ್ಲಿ ಈದ್‌ಮಿಲಾದ್ ಮತ್ತು ಕ್ರಿಸ್‌ಮಸ್ ಹಬ್ಬಗಳು ಬರಲಿವೆ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಪರವಾಗಿ ಹಾರ್ದಿಕ ಶುಭಾಶಯಗಳು. 2017ನೇ ಶಕವರ್ಷವು ಕೊನೆಗೆ ಬರುತ್ತಲಿದೆ. ಮೌಲ್ಯಮಾಪನ ಮತ್ತು ಪುನರಾವಲೋಕನದ ಸಮಯವಿದು. 2018ರಲ್ಲಿ ನಾವು ಸಾಧಿಸಬೇಕಾದ ಗುರಿಗಳನ್ನು ಗುರುತಿಸಿಕೊಂಡು ಅವುಗಳನ್ನು ಸಾಧಿಸಲು ಅಗತ್ಯವಾದ ಕ್ರಿಯಾ ಯೋಜನೆಗಳನ್ನು ರೂಪಿಸಿಕೊಳ್ಳೋಣ.

**ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ,**

**ತಮ್ಮ ವಿಶ್ವಾಸಿ**

**ಪಿ.ಜಿ.ಆರ್. ಸಿಂಧ್ಯ**
**ರಾಜ್ಯ ಮುಖ್ಯ ಆಯುಕ್ತರು**



# MESSAGE

Dear Brothers and Sisters,

The Bharat Scouts and Guides is a voluntary and educational movement to shape and build the character of young people by including values of self-discipline, social service and patriotism. The Scout Movement which was founded by Lord Baden Powell in 1907 has now spread in many countries and territories affiliated to WOSM (161 NSOs) and WAGGGS (147 MOs). The ideals of the Movement are being practised in many other countries who are awaiting affiliation.

7th November, 1950 is a golden letter day in the History of Indian Scouting Guiding. It is the day on which the Scout and Guide Associations came under a unified National Organisation for Scouts and Guides in Independent India under the banner of "THE BHARAT SCOUTS AND GUIDES". In the year 2000 when we celebrated the Golden Jubilee of the Foundation of Bharat Scouts and Guides, it was decided to celebrate the Day as "Flag Day of Bharat Scouts and Guides" to involve the community in celebrating the anniversary of the Foundation by presenting a token flag to well-wishers of the movement and to receive contributions from them in support of the activities of the Association.

During the last six and half decades, the Bharat Scouts and Guides has played a vital role in educating millions of young people in life-skills and rendered yeoman service to the community. Our services were recognized nationally and internationally. The Bharat Scouts and Guides was conferred with the "Messenger of Peace" award by United Nations in the year1987.

Our members actively contributed in conservation activities, promoting cleanliness through Swachh Bharat Mission, preventive health care through awareness activities on communicable diseases and preventive medicine. We educate the youth on inherent safety threats due to drug abuse and child abuse.

Our members are trained in disaster response and relief operatons to act during natural calamities. We contributed to the community during recent floods in Uttar Pradesh. Your support to this movement is essential for us to take forward our mission.

On this Flag Day, I request fellow citizens to encourage the activities of the Scout/Guide Movement by accepting the token flag presented and contribute to the Flag Day fund of the Bharat Scouts and Guides which will be channelized for Community Development activities all over the Country.

I wish all the members of the Bharat Scouts and Guides a Happy Flag Day.

With Scouts & Guides Greetings.

**Dr. K.K. Khandelwal**
Chief National Commissioner, B.S&G

# TREFOIL BRIDGES 2017 AT SINGAPORE




Singapore Trefoil Guild organized the event Trefoil Bridges 2017 from 26th Oct 2017 to 28th Oct 2017 at Singapore. They had extended invitation to all the friends of Asia Pacific WAGGGS aslo. The Objectives of the event were :

1) Celebrate the Centenary of Guiding in Singapore.

2) Share Guiding Values & Develop International Friendships.

3) Experience remarkable cultures & Take in the breath taking tours of Singapore.

132 members including F.A.P.W members from 12 countries participated in the event.

The Bharat Scouts & Guides, India was represented by Mrs. B.V. RAMARATNA former ASC(G), Karnataka.

On 26th Oct. 2017evening the participants were welcomed with a grand dinner at Hotel Jalan Rajah, Singapore. President of Girl Guides, Singapore M/s. CHANG HWEE NEE was the Guest of Honor. All the participants were introduced to her & she addressed the gathering & wished all success for the event

On 27th Oct 2017 the event started at 09:30am at Girl Guide Headquarters, Singapore with Welcome Speech & inaugural address by the Guest of Honor. Mrs. YVETTE CHEAK, Vice - President of Trefoil Guild, Singapore. Next was Group Introduction. Representatives of all the countries were asked to palce their National Flag in the designated place & give self introduction. Guest of Honor greeted them & presented Mementoes. In the afternoon there was sharing session among guilds. It was a Great opportunity to share Fundamentals, Activities, Programmes & Success stories of Bharat Scouts & Guides, India. This Presentation was very much appreciated by all participants. In between there were craft, quiz & activities for the participants which were enjoyable.

After the break there was Audio Visual Presentation depicting the purpose & advantages of Membership of F.A.P.W. followed by the pinning ceremony. Dr. JUSEON BYON, founder Chairperson of F.A.P.W. presented pins to new members of F.A.P.W.

In the evening grand campfire was arranged after dinner in which members of all the countries participated in sing song, dances, drama, folk dance etc. It was a great privilege to present culture & tradition of India through "KOLATA" a folk dance. All the participants enjoyed & applauded the presentation. The day concluded with TABS.



On 28th Oct 2017 participants were taken for a tour of Botanical Gardens at 09:30 am. After that there was a Grand Farewell Lunch at Hotel Kintamani, Singapore. The Guest of Honor Ms. SITI N J, international Commissioner of Girl Guide Singapore Thanked & Congratulated the organizers for grand success of the event & wished all the members good luck.

It was a memorable & wonderful event. KUDOS to Trefoil Guild Singapore for their grand hospitality & Great success of th event which gave a great opportunity to share guiding values, activities of our Organization, Culture of our Country & development of International friendship & also to celebrate the Centenary of Guiding in Singapore.

It was a moment of pride & honor to represent Bharat Scouts & Guides, India enabling our flag to reach great height.

**B. V. RAMARATNA**

**(Former ASC(G), BS&G, Karnataka)**

# 67th Foundation Day

The Bharat Scouts and Guides, National Headquarters celebrated its 67th Foundation Day as Flag Day. The Association led by its President Dr. Anil Kumar Jain re-dedicated themselves to the services to the nation. Dr. K.K. Khandelwal, IAS, Chief National Commissioner called on Hon'ble Vice President of India Shri M. Venkaiah Naidu along with the delegation of members of the Bharat Scouts and Guides and presented Token Flag to Hon'ble Vice President of India. While addressing the delegation Hon'ble Vice President of India lauded the dedicated services of the members of the Bharat Scouts and Guides in service to the Nation. The Hon'ble Vice President appreciated the initiatives taken by the young people for promotion of Swach Bharat Mission especially adoption of Historical Monuments in collaboration with the Archelogical Survey of India. He also said that the initiatives to create awareness on Health, Hygiene and Education of Girl Child being undertaken by the Bharat Scouts and Guides as initiatives in transforming our Nation as a World Leader.

The members of the Bharat Scouts and Guides also called on Hon'ble Chief Ministers Governors, Minister of Education, Sports etc. to seek their continued patronage for promoting the Mission of the Scouting and Guiding. The Bharat Scouts and Guides look forward to have 10 million active members on this role by 2021 as envisaged in their Vision Document 2024.

# The Bharat Scouts and Guides, Karnataka Celebration of Foundation Day

After the formation of Bharat Scouts and Guides Association as one single United Organization that Day is Celebrated as "Foundation Day" on 7th November of each year all over the Country. Accordingly, under the auspicious of State Headquarters, Bharat Scouts and Guides, Karnataka the Flag Day Stickers were released in a Unique Way as detailed below on 7th November 2017.

Dr. Mahesh Joshi, Former Additional Director General, Southern Region of Dooradarshana, Bengaluru released Flag Day Stickers at Shanthigruha, State Headquarters. Sri P.G.R.Sindhia, State Chief Commissioner and other State Officials Scouts, Guides, Rovers and Rangers were present on the occasion.



Later different teams were formed under the leadership of Office-bearers and Senior Volunteers and Professionals of State Headquarters Officials. Our State Chief Commissioner Sri P.G.R. Sindhia & Dr. Mahesh Joshi and others called on Sri Vajubhai Rudhabai Vala Ji, Hon'ble Governor of Karnataka & Patron, Bharat Scouts and Guides, Karnataka at Raj Bahvan, where he released the Flag Day Stickers. They also called on Most Rev. Dr.Bernard Moras, Archbishop of Bangaluru, Smt. Kiran Mazumdar-Shaw, Chairperson & Managing Director of BIOCON.

The other teams called on Sri Ramalinga Reddy, Hon'ble Home Minister of Karnataka, Sri K.J.George, Hon'ble Minister for Bengaluru Development & Town Planning, Sri Tanveer Sait, Hon'ble Minister Primary & Secondary Education, Sri T.B. Jayachandra, Hon'ble Minister for Law & Parliamentary Affairs, Sri U.T.Khadar, Hon'ble Minister for Food & Civil Supplies, Sri R.Roshan Baig, Hon'ble Minister for Urban Development & Haj who released the Flag Day Stickers in their Chambers at Vidhana Soudha and Vikas Soudha and wished the movement and its activities a glorious future. They also contributed generouslyfor the Flag Day funds.

Sri Kondajji B.Shanmukhappa, Vice-President, Sri N.Srinivasan, Hqrs. Commissioner (S) Smt B.V. Ramalatha and others called on Dr. Go.Ru. Channabasappa ASC(S) and Sri H.S.Doreswamy, Freedom Fighter.

The other team called on Sri Subash Chandra Kuntia, I.A.S., Chief Secretary to Government, Sri I.N.S.Prasad, I.A.S., Additional Chief Secretary to Government, Smt K.Rathnaprabha, I.A.S., Additional Chief Secretary to Govt., Sri D.V.Prasad, I.A.S., Additional Chief Secretary, Smt Shalini Rajanish, I.A.S., Principal Secretary, Dept. of Parimary & Secondary Education, Dr.P.C.Jaffer, I.A.S., Commissioner for Public Instruction, Dr.M.T.Reje, I.A.S., State Project Director, SSA, Smt Philomina Lobo, Director (Secondary Education), Sri B.K.Basavaraj, Director (Primary Education), Smt Sumangala, Director, Karnataka Secondary Education Board, Dr.H.N.Ramesh, Vice-Chancellor, Bengaluru University, Sri Siddaiah, Former State Secretary, Sri W.P.Krishna, Hon. Secretary, Sheshadripuram Education Institutions & Chairman of Gandhi Bhavana, Bengaluru.

The teams were led by Sri P.G.R.Sindhia, State Chief Commissioner, Sri Kondajji B. Shanmukhappa, Vice-President, Sri M.A. Khalid, State Commissioner (Scouts) Smt. Geetha Nataraj, State Commissioner (Guides), Sri T.S.Lucas, Senior Leader & Former Vice-President of BS&G, Sri Chinnaswamy Reddy, State Secretary, Sri Prabhudeva J. Chigateri, State Treasurer, Sri K.Gangappa Gowda, ASC(S), Assistant State Commissioners of (Scouts & Guides), Headquarters Commissioners of (Scouts & Guides), State Org. Commissioners (S&G) & State Trg. Commissioners (Scouts& Guides) Scouts/ Guides / Rovers and Rangers accompanied these teams.

### *Visit to B.B.M.P. Office*



A Team led by Sri T.S.Lucas, Senior Leader and Former Vice-President, The Bharat Scouts and Guides and Sri M.A. Chellaiah, Nodal Officer, B.B.M.P. met Smt Padmavathi Narasimha Murthy, Deputy Mayor, Sri Padmanabha Reddy, Leader Opposition Party, Sri Guna Sekhar, Chairman, Taxation and Finance Committee, Sri S.G. Raveendra, I.I.S., Special Commissioner (Estate, Markets and Education) and District Chief Commissioner, BBMP District Association. Sri Vijaya Shanka, I.A.S., Special Commissioner (Projects), Sri Lakshmi Ganesh, KSPS, Superintendent of Police, BBMP (Task Force), Smt K.R.Pallavi, Council Secretary and District Secretary, BBMP District Association Smt G.R.Harishilpa, KAS, Asst. Commissioner (Adm) and District Commissioner(G), BBMP. Smt. K.V. Shamala, STC(G) and Scouts and Guides were present.





# CELEBRATION OF EKATA DAY AND SARDAR VALLABHBHAI PATEL JAYANTHI

Bharat Scouts and Guides, Karnataka organized "**National Unity Day**" and "**Sardar Valabhai Patel Jayanthi**" on 31st October 2017at State Headquarters at Kondajji Basappa Auditorium, Shanthigruha, Palace Road, Bengaluru. Office Staff and Unit Leaders participated under the leadership of Sri P.G.R. Sindhia, State Chief Commissioner.

Sri Kondajji.B.Shanmukhappa, Vice-President, Bharat Scouts and Guides, Karnataka, and Sri Chinnaswamy Reddy, State Secretary were present on the occasion. Bengaluru Rural Office Bearers were also present on the occasion.




State Chief Commissioner gave a brief speech about Iron Man Sardar Valabhai Patel his achievements and his contribution for the freedom of the Country.



Bengaluru South District organized "**National Unity Day**", Sardar Valabhai Patel Jayanthi at Dr Annie Besant Scouts and Guides, State Training & Camping Centre, D'bpura. 700 Scouts and Guides participated and oath was taken by all the participants.

Davanagere District also organized "**National Unity Day**" with all the Office bearers & Scouts and Guides, some of the Unit Leaders also participated. In the same time All faith Prayer and Route March was conducted.

250 Rashtrapathi Guides and Unit Leaders participated in Testing Camp at Kondajji Basappa State Training & Camping Centre, Kondajji organized "**National Unity Day**", Sardar Valabhai Jayanthi under the leader of Smt. N.K.Chaya, L.T(G) & oath was taken by all the participants.

All the other Districts of Bharat Scouts and Guides, Karnataka also organized and Celebrated meaningfully with Office bearers and Scouts and Guides.

# ರಾಜ್ಯ ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳ ಪದಕ ತರಬೇತಿ ಶಿಬಿರ ಹಾಗೂ ದಿ. ಕೊಂಡಜ್ಜಿ ಬಸಪ್ಪ ಅವರ ಪುಣ್ಯ ಸ್ಮರಣೆ



ನವಂಬರ್ 13 ರಿಂದ 17ರವರಿಗೆ ಕೊಂಡಜ್ಜಿ ತರಬೇತಿ ಕೇಂದ್ರದಲ್ಲಿ ರಾಜ್ಯ ಮಟ್ಟದ ರಾಜ್ಯಪುರಸ್ಕಾರ ಸ್ಕೌಟ್ಸ್ ಮತ್ತು ಗೈಡ್ಸ್, ರೋವರ್ಸ್, ರೇಂಜರ್ಸ್ ಪದಕ ತರಬೇತಿಯನ್ನು ಸಂಘಟಿಸಲಾಗಿತ್ತು. ಕರ್ನಾಟಕ ರಾಜ್ಯದ 17 ಜಿಲ್ಲೆಗಳಿಂದ 181 ಸ್ಕೌಟ್ಸ್, 202 ಗೈಡ್ಸ್, 69 ರೇಂಜರ್ಸ್, 15 ರೋವರ್ಸ್ 15 ಸ್ಕೌಟರ್, 19 ಗೈಡರ್, 17 ಸಿಬ್ಬಂದಿ ವರ್ಗದವರು ಭಾಗವಹಿಸಿದ್ದರು.

ನವಂಬರ್14ರ ಬೆಳಗ್ಗೆ 8 ಗಂಟೆಗೆ ದಿ॥ ಕೊಂಡಜ್ಜಿ ಬಸಪ್ಪ ರವರ 35ನೇ ಪುಣ್ಯ ಸ್ಮರಣಾರ್ಥವಾಗಿ ಸರ್ವಧರ್ಮ ಪ್ರಾರ್ಥನೆಯನ್ನು ನಡೆಸಲಾಯಿತು. ಅತಿಥಿಗಳಾಗಿ ಭಾಗವಹಿಸಿದ್ದ. ಶ್ರೀ ಎಸ್.ಎ. ರವೀಂದ್ರನಾಥ್, ಕರ್ನಾಟಕ ಸರ್ಕಾರದ ಮಾಜಿ ಸಚಿವರು ಮಾತನಾಡಿ ಕೊಂಡಜ್ಜಿ ಬಸಪ್ಪನವರ ಸಾರ್ವಜನಿಕ ಸೇವೆ ಮತ್ತು ಸಹಕಾರಿ ಕ್ಷೇತ್ರದ ಸಾಧನೆಯನ್ನು ಸ್ಮರಿಸಿದರು. ಶ್ರೀ ಕೊಂಡಜ್ಜಿ.ಬ. ಷಣ್ಮುಖಪ್ಪ, ರಾಜ್ಯ ಸಂಸ್ಥೆ ಉಪಾಧ್ಯಕ್ಷರು, ಮಾತನಾಡಿ ಕೊಂಡಜ್ಜಿ ಬಸಪ್ಪನವರು ನಡೆದು ಬಂದ ಹಾದಿಯನ್ನು ವಿವರಿಸಿದರು.

ರಾಜ್ಯ ಮುಖ್ಯ ಆಯುಕ್ತರಾದ ಶ್ರೀಯುತ ಪಿ.ಜಿ.ಆರ್. ಸಿಂಧ್ಯಾ ಅವರು ಮಾತನಾಡಿ ಇಂದಿನ ಸಮಾಜದಲ್ಲಿ ಯುವಕ-ಯುವತಿಯರಿಗೆ ಬೇಕಾಗಿರುವ ಸಾಮಾಜಿಕ, ನೈತಿಕ ಹಾಗೂ ಮಾನಸಿಕ ಸಾಮರ್ಥ್ಯವನ್ನು ಬೆಳೆಸಲು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಉತ್ತಮವಾದ ಕಾರ್ಯವನ್ನು ಮಾಡುತ್ತಿದೆ ಎಂದು ಹೇಳಿದರು.

ದಾವಣಗೆರೆ ಜಿಲ್ಲಾ ಸಂಸ್ಥೆ ಅಧ್ಯಕ್ಷರು ಹಾಗೂ ಚಳವಳಿಯ ಹಿರಿಯ ಸದಸ್ಯರಾದ ಶ್ರೀ ಮಹಮದ್ ವಾಸಿಲ್ ಮತ್ತು ದಿ.ಜಯಣ್ಣ ಚಿಗಟೇರಿ ಅವರ ಪುತ್ರರಾದ ಶ್ರೀ ಮುರುಘರಾಜೇಂದ್ರ ಚಿಗಟೇರಿ ಇವರುಗಳು ದಿ.ಕೊಂಡಜ್ಜಿ ಬಸಪ್ಪನವರು ಸ್ಕೌಟ್-ಗೈಡ್ ಚಳವಳಿಯ ಬೆಳವಣಿಗೆಗೆ ಸಲ್ಲಿಸಿದ ಸೇವೆಯನ್ನು ಸ್ಮರಿಸಿ ಅವರ ಸಾಮಾಜಿಕ ಕಳಕಳಿ ಬಗ್ಗೆ ವಿವರಿಸಿದರು. ಜೊತೆಗೆ ಕೊಂಡಜ್ಜಿ ಗ್ರಾಮದ ಶ್ರೀ ಮರುಸಿದ್ದೇಶ್ವರ ಭಜನಾ ಮಂಡಳಿಯವರು ಭಜನೆ ಕಾರ್ಯಕ್ರಮ ನಡೆಸಿಕೊಟ್ಟರು. ಈ ಕಾರ್ಯಕ್ರಮದಲ್ಲಿ ಶ್ರೀಮತಿ.ಸಿ. ಮಂಜುಳಾ, ರಾಜ್ಯ ಸಂಘಟನಾ ಆಯುಕ್ತರು(ಗೈ) ಕಾರ್ಯಕ್ರಮ ನಿರೂಪಿಸಿದರು. ಸ್ಕೌಟ್ ವಿಭಾಗದ ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ. ಎಂ.ಪ್ರಭಾಕರ ಭಟ್ ಅವರು ಎಲ್ಲರಿಗೂ ವಂದಿಸಿದರು.

ಶಿಬಿರದ ಸಲಹೆಗಾರರಾಗಿ ಶ್ರೀಮತಿ ಬಿ.ಡಿ ಶಾಂತಾ, ಎಲ್.ಟಿ(ಗೈ) ಇವರು ಪ್ರಾವಿಣ್ಯತಾ ಪದಕಗಳ ಬಗ್ಗೆ ವಿವರಗಳನ್ನು ಒದಗಿಸಿದರು. ಶಿಬಿರದಲ್ಲಿ ರಾಜ್ಯ ಪುರಸ್ಕಾರ ಪದಕಗಳಿಸಲು ಅವಶ್ಯವಾದ ವಿಷಯಗಳ ಬಗ್ಗೆ ವಿವರಗಳನ್ನು ನುರಿತ ಅನುಭವಿ ನಾಯಕ- ನಾಯಕಿರ ನೆರವಿನೊಂದಿಗೆ ಅಭ್ಯರ್ಥಿಗಳಿಗೆ ನೀಡಲಾಯಿತು.

ಸ್ಕೌಟ್ ವಿಭಾಗದ ನಾಯಕರಾಗಿ ಡಾ॥ ಹೆಚ್.ಭರಶೆಟ್ಟಿ, ಹಾಗು ಇವರಿಗೆ ಸಹಾಯಕರಾಗಿ ಶ್ರೀ ರಾಚಯ್ಯ, ಶ್ರೀ ಶಿವಣ್ಣ, ಜಿಲ್ಲಾ ಸ್ಕೌಟ್ ಸಂಘಟಕರು(ಸ್ಕೌ) ಗೈಡ್ ವಿಭಾಗಕ್ಕೆ ಶ್ರೀಮತಿ ಎಲ್.ಎಸ್.ಬಹಾದ್ದೂರಿ ಅವರು ನಾಯಕಿಯಾಗಿ ಇವರಿಗೆ ಸಹಾಯಕಿಯಾಗಿ, ಕು.ಅಶ್ವಿನಿ, ಸೌಮ್ಯ, ರೇಣುಕಾ, ನಾನ್ಸಿ ಹಾಗೂ ರೋವರ್ ವಿಭಾಗಕ್ಕೆ ನಾಯಕರಾಗಿ ಶ್ರೀ ರಾಜೇಶ್ ಅವಲಕ್ಕಿ ಮತ್ತು ರೇಂಜರ್ ವಿಭಾಗಕ್ಕೆ ಶ್ರೀಮತಿ ಅನ್ನಪೂರ್ಣ ಕುರಬೇಟ, ಇವರು ನಾಯಕಿಯಾಗಿ ಕರ್ತವ್ಯ ಸಲ್ಲಿಸಿದರು.







## ಜಿಲ್ಲಾ ಮುಖ್ಯ ಆಯುಕ್ತರು, ಜಿಲ್ಲಾ ಆಯುಕ್ತರು (ಸ್ಕೌಟ್ ಮತ್ತು ಗೈಡ್), ಜಿಲ್ಲಾ ಕಾರ್ಯದರ್ಶಿಗಳ ಮತ್ತು ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ ಮತ್ತು ಗೈಡ್ಸ್)ಗಳ ಸಭೆ



ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆಯ ಜಿಲ್ಲಾ ಮುಖ್ಯ ಆಯುಕ್ತರು, ಜಿಲ್ಲಾ ಆಯುಕ್ತರು (ಸ್ಕೌಟ್ಸ್ & ಗೈಡ್ಸ್), ಜಿಲ್ಲಾ ಕಾರ್ಯದರ್ಶಿಗಳು, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್ & ಗೈಡ್ಸ್)ರವರುಗಳ ಸಮಾವೇಶವನ್ನು ಅಕ್ಟೋಬರ್ 28 ರಂದು ಬೆಳಗ್ಗೆ 9.00ಗಂಟೆಗೆ ಕೊಂಡಜ್ಜಿ ಬಸಪ್ಪ ಸಭಾಂಗಣ, ರಾಜ್ಯ ಪ್ರಧಾನ ಕಛೇರಿ ಏರ್ಪಡಿಸಲಾಗಿತ್ತು. ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪರವರು ಹಾಗೂ ರಾಜ್ಯ ಕಾರ್ಯದರ್ಶಿ ಶ್ರೀ ಸಿ.ಎಸ್. ರೆಡ್ಡಿ ಅವರುಗಳು ಜ್ಯೋತಿಬೆಳಗಿಸುವ ಮೂಲಕ ಸಭೆಯನ್ನು ಉದ್ಘಾಟಿಸಿದರು.

ಅಕ್ಟೋಬರ್ 27ರಂದು ನಿಧನಹೊಂದಿದ ಡಾ॥ ಪಿ.ವಿ.ರತ್ನ ಅರಸ್, ಮಾಜಿ ಸಹಾಯಕ ರಾಜ್ಯ ಆಯುಕ್ತರು (ಗೈಡ್ಸ್), ಭಾ.ಸ್ಕೌ & ಗೈ, ಕರ್ನಾಟಕ, ಮೈಸೂರು ಹಾಗೂ ಶ್ರೀ ಜಿ.ಎ. ನರಗುಂದ, ತರಬೇತಿದಾರರು (ಸ್ಕೌಟ್ಸ್), ಭಾ.ಸ್ಕೌ & ಗೈ, ಕರ್ನಾಟಕ, ಧಾರವಾಡ ಇವರುಗಳಿಗೆ ಶ್ರದ್ಧಾಂಜಲಿ ಅರ್ಪಿಸಲಾಯಿತು.

ಸಭೆಯಲ್ಲಿ ಜಿಲ್ಲಾ ಸಂಸ್ಥೆಗಳಲ್ಲಿ ಆಯೋಜಿಸಿರುವ ಕಾರ್ಯಕ್ರಮ, ತರಬೇತಿ, ಚಟುವಟಿಕೆ ಮತ್ತು ಸಾಧಿಸಿರುವ ಅಂಕಿ-ಅಂಶಗಳ ಬಗ್ಗೆ ಚರ್ಚಿಸಲಾಯಿತು. ಕರ್ನಾಟಕ ದರ್ಶನ, ಮೂಲ ತರಬೇತಿ ಶಿಬಿರಗಳನ್ನು ಆಯೋಜಿಸುವ ಹಾಗೂ ಜಿಲ್ಲಾ ಸಂಸ್ಥೆಗಳ ಸಮಗ್ರ ಅಭಿವೃದ್ಧಿಯ ಬಗ್ಗೆ ಚರ್ಚಿಸಲಾಯಿತು. ಶ್ರೀ ಎಂ.ಎ.ಖಾಲಿದ್, ರಾಜ್ಯ ಆಯುಕ್ತರು (ಸ್ಕೌಟ್ಸ್), ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು (ಗೈಡ್ಸ್), ಶ್ರೀ ಎನ್. ಶ್ರೀನಿವಾಸನ್, ರಾಜ್ಯ ಸ್ಥಾನಿಕ ಆಯುಕ್ತರು, ಶ್ರೀ ಕೆ.ಗಂಗಪ್ಪಗೌಡ, ಸಹಾಯಕ ರಾಜ್ಯ ಆಯುಕ್ತರು (ಸ್ಕೌಟ್ಸ್), ಇವರುಗಳು ಸಭೆಯಲ್ಲಿ ಹಾಜರಿದ್ದರು.

ಶ್ರೀ ಪಿ.ಜಿ.ಆರ್.ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಸಭೆಯ ಅಧ್ಯಕ್ಷತೆ ವಹಿಸಿ ಮಾತನಾಡಿ, ರಾಜ್ಯ ಸಂಸ್ಥೆಯ ಯೋಜನೆಗಳ ಬಗ್ಗೆ ಸಭೆಗೆ ವಿವರಿಸಿದರು. ಜಿಲ್ಲಾ ಸಂಸ್ಥೆಗಳಿಗೆ ನಿಗಧಿಪಡಿಸಿರುವ ಅಂಕಿ-ಅಂಶಗಳ ಗುರಿಯನ್ನು ತಲುಪಲು ಹಾಗೂ ಮೂಲ ತರಬೇತಿ ಶಿಬಿರಗಳನ್ನು ಆಯೋಜಿಸುವಲ್ಲಿ ಕ್ರಮ ಕೈಗೊಳ್ಳಬೇಕು. ಕರ್ನಾಟಕ ದರ್ಶನ ಕಾರ್ಯಕ್ರಮವನ್ನು ಉತ್ತಮವಾಗಿ ಯೋಜಿಸಿ ಲೆಕ್ಕ-ಪತ್ರಗಳನ್ನು ಸಲ್ಲಿಸಬೇಕೆಂದರು. ರಾಷ್ಟ್ರೀಯ ತರಬೇತಿ ಕೇಂದ್ರ, ಪಚಮಡಿಯಲ್ಲಿ ನಡೆಯುವ ರೀತಿಯಲ್ಲಿಯೇ ರಾಜ್ಯ ತರಬೇತಿ ಕೇಂದ್ರಗಳಾದ ಡಾ॥ ಆನಿಬೆಸೆಂಟ್ ತರಬೇತಿ ಕೇಂದ್ರ, ದೊಡ್ಡಬಳ್ಳಾಪುರ ಮತ್ತು ಕೊಂಡಜ್ಜಿ ಬಸಪ್ಪ ತರಬೇತಿ ಕೇಂದ್ರ, ಕೊಂಡಜ್ಜಿಯಲ್ಲಿ ನಿರಂತರ ತರಬೇತಿ ಶಿಬಿರ ಮತ್ತು ಕಾರ್ಯಕ್ರಮಗಳನ್ನು ಆಯೋಜಿಸುವುದಾಗಿ ತಿಳಿಸಿದರು.







## ರಾಷ್ಟ್ರಪತಿ ಸ್ಕೌಟ್ಸ್ ಪರೀಕ್ಷಾ ಶಿಬಿರ

ಅಕ್ಟೋಬರ್ 11 ರಿಂದ 16ರವರೆಗೆ ರಾಷ್ಟ್ರಪತಿ ಸ್ಕೌಟ್ಸ್ ಪರೀಕ್ಷಾ ಶಿಬಿರವನ್ನು ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿ, ಹರಿಹರ ತಾಲ್ಲೂಕು, ದಾವಣಗೆರೆ ಜಿಲ್ಲೆಯಲ್ಲಿ ರಾಷ್ಟ್ರ ಸಂಸ್ಥೆಯ ಹಾಗೂ ರಾಜ್ಯ ಸಂಸ್ಥೆಯ ಜಂಟಿ ಆಶ್ರಯದಲ್ಲಿ ಸಂಘಟಿಸಲಾಯಿತು. ಶಿಬಿರದಲ್ಲಿ 120 ಸ್ಕೌಟ್‌ಗಳು ಭಾಗವಹಿಸಿದ್ದರು. ಶ್ರೀ ಅರುಣ್ ಚಂದ್ರನ್ ಪತ್ತಾರ್ ಶಿಬಿರದ ನಾಯಕರಾಗಿ ಕಾರ್ಯ ನಿರ್ವಹಿಸಿದ್ದರು. ಶ್ರೀ ಕೊಗ್ಗ ಗಾಣಿಗ, ಶ್ರೀ ಬಾಬು ರಾವ್ ನಿಂಬೂರಿ, ಶ್ರೀ ಮಹೇಶ್, ಶ್ರೀ ದಾದ ಸಾಹೇಬ್ ಅತ್ತಾರ್ ಪರೀಕ್ಷರಾಗಿ ಸಿಬ್ಬಂದಿಗಳಾಗಿ ಭಾಗಹಿಸಿದ್ದರು. ಅಕ್ಟೋಬರ್ 11ರಂದು ರಾಷ್ಟ್ರಪತಿ ಸ್ಕೌಟ್‌ಗಳಿಗೆ ಪೂರ್ವ ಸಿದ್ಧತಾ ತರಬೆತಿಯನ್ನು ನೀಡಲಾಯಿತು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ಶೀಬಿರಕ್ಕೆ ಭೇಟಿ ನೀಡಿ ವಿದ್ಯಾರ್ಥಿಗಳಿಗೆ ಶುಭ ಹಾರೈಸಿದರು. ಶ್ರೀ ಎಲ್.ಟಿ.ಲೋಕೇಶ್, ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್ಸ್), ಶ್ರೀ ಎನ್ ಶ್ರೀನಿವಾಸನ್, ರಾಜ್ಯ ಕೇಂದ್ರ ಸ್ಥಾನೀಯ ಆಯುಕ್ತರು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು. ಶ್ರೀ ಎಂ. ಪ್ರಭಾಕರ್ ಭಟ್, ರಾಜ್ಯ ಸಂಘಟನಾ ಆಯುಕ್ತರು(ಸ್ಕೌಟ್ಸ್) ಶಿಬಿರ ಸಂಘನೆಯಲ್ಲಿ ಸಹಕರಿಸಿದರು.

## ರಾಷ್ಟ್ರಪತಿ ಸ್ಕೌಟ್ಸ್ ಪರೀಕ್ಷಾ ಶಿಬಿರ

ನವಂಬರ್ 07 ರಿಂದ 11ವರೆಗೆ ರಾಷ್ಟ್ರಪತಿ ಸ್ಕೌಟ್ಸ್ ಪರೀಕ್ಷಾ ಶಿಬಿರವನ್ನು, ರಾಜ್ಯ ತರಬೇತಿ ಕೇಂದ್ರ ಡಾ. ಅನಿಬೆಸೆಂಟ್ ಪಾರ್ಕ್, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ರಾಷ್ಟ್ರ ಸಂಸ್ಥೆ ಹಾಗೂ ರಾಜ್ಯ ಸಂಸ್ಥೆಯ ಸಂಯುಕ್ತ ಆಶ್ರಯದಲ್ಲಿ ಆಯೋಜಿಸಲಾಗಿತ್ತು. ಈ ಶಿಬಿರದಲ್ಲಿ ಒಟ್ಟು 178 ಸ್ಕೌಟ್‌ಗಳು ಭಾಗವಹಿಸಿದ್ದರು. ಕರ್ನಾಟಕದಿಂದ 135, ಪುದುಚೇರಿಯಿಂದ 16, ಸದರನ್ ರೈಲ್ವೆಯಿಂದ 26 ಸ್ಕೌಟ್‌ಗಳು ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಶ್ರೀ ಅರುಣ ಚಂದ್ರನ್ ಪತ್ತಾರ್ ಹಾಗೂ ಸಹಾಯಕರಾಗಿ ಶ್ರೀ ಜಾನ್‌ಸನ್, ತಮಿಳುನಾಡು, ಶ್ರೀ ಮುರುಗನ್, ಪುದುಚೇರಿಯಿಂದ ಭಾಗವಹಿಸಿದ್ದರು. ಕರ್ನಾಟಕದಿಂದ ಶ್ರೀ ಬಾಬುರಾವ್ ನಿಂಬೂರಿ, ಶ್ರೀ ರಾಚಯ್ಯ ನಾಸಿ, ಶ್ರೀ ಎ.ಬಿ.ಕೋರಿ, ಶ್ರೀ ಬಸವರಾಜ ಗೋಗಿ ಕಾರ್ಯ ನಿರ್ವಹಿಸಿದರು. ನವಂಬರ್ 06ರಂದು ರಾಷ್ಟ್ರಪತಿ ಸ್ಕೌಟ್‌ಗಳಿಗೆ ಪೂರ್ವ ಸಿದ್ಧತಾ ತರಬೇತಿಯನ್ನು ನೀಡಲಾಯಿತು. ಶಿಬಿರದಲ್ಲಿ ನವಂಬರ್ 07ರಂದು ಧ್ವಜ ಬಿಡುಗಡೆ ಮಾಡಲಾಯಿತು. ದೊಡ್ಡಬಳ್ಳಾಪುರದ ನಗರದಲ್ಲಿ ರಾಷ್ಟ್ರಪತಿ ಸ್ಕೌಟ್ಸ್ ಶಿಬಿರದ ಸ್ಕೌಟ್‌ಗಳು ಧ್ವಜ ಚೀಟಿ ನೀಡಿ ನಾಗರಿಕರಲ್ಲಿ ಧ್ವಜ ದಿನಾಚರಣೆಯ ಮಹತ್ವವನ್ನು ತಿಳಿಸಿದರು. ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ಎಂ ಪ್ರಭಾಕರ್ ಭಟ್ ಶಿಬಿರ ಸಂಘಟನೆಯಲ್ಲಿ ಸಹಕರಿಸಿದರು.

## ರಾಷ್ಟ್ರಪತಿ ಸ್ಕೌಟ್ಸ್ ಹಾಗೂ ರಾಷ್ಟ್ರಪತಿ ಗೈಡ್ಸ್ ಪರೀಕ್ಷಾ ಶಿಬಿರ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಷ್ಟ್ರ ಸಂಸ್ಥೆಯ ದಕ್ಷಿಣ ಪ್ರಾಂತೀಯ ಕಛೇರಿ ಹಾಗೂ ರಾಜ್ಯ ಸಂಸ್ಥೆಯ ಸಂಯುಕ್ತ ಆಶ್ರಯದಲ್ಲಿ ಅಕ್ಟೋಬರ್ 24 ರಿಂದ 28ರವರೆಗೆ ರಾಷ್ಟ್ರಪತಿ ಸ್ಕೌಟ್ಸ್-ಗೈಡ್ಸ್ ಪರೀಕ್ಷಾ ಶಿಬಿರವನ್ನು ಡಾ॥ ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸಂಘಟಿಸಲಾಗಿತ್ತು. ಅಕ್ಟೋಬರ್ 23ರಂದು ಪೂರ್ವ ಸಿದ್ಧತಾ ಪರೀಕ್ಷಾ ಶಿಬಿರ ಏರ್ಪಡಿಸಲಾಯಿತು.

ಈ ಶಿಬಿರದಲ್ಲಿ ಸ್ಕೌಟ್ಸ್ ವಿಭಾಗದ ಕರ್ನಾಟಕ ರಾಜ್ಯದಿಂದ 154 ಸ್ಕೌಟ್ಸ್, 178 ಗೈಡ್ಸ್, ಸೌತ್ ವೆಸ್ಟರ್ನ್ ರೈಲ್ವೆಯಿಂದ 5 ಸ್ಕೌಟ್, 9 ಗೈಡ್, ಸೌತ್ ಸೆಂಟ್ರಲ್ ರೈಲ್ವೆಯಿಂದ 3 ಸ್ಕೌಟ್, 13 ಗೈಡ್, ತಮಿಳುನಾಡಿನಿಂದ 9 ಸ್ಕೌಟ್ಸ್, ಕೇರಳದಿಂದ 1 ಗೈಡ್ ಒಟ್ಟು 171 ಸ್ಕೌಟ್ಸ್, 200 ಗೈಡ್ಸ್, 19 ಸ್ಕೌಟರ್ಸ್, 17 ಗೈಡರ್ಸ್, ಸ್ಕೌಟ್ಸ್-ಗೈಡ್ಸ್ ವಿಭಾಗದ ಪರೀಕ್ಷರು ಸಿಬ್ಬಂದಿಗಳು ಭಾಗವಹಿಸಿದ್ದರು. ಸ್ಕೌಟ್ಸ್ ವಿಭಾದ ಪರೀಕ್ಷಾ ಶಿಬಿರದ ನಾಯಕರಾಗಿ ಅರುಣ್ ಚಂದ್ರ ಪತ್ತಾರ್, ಸಹಾಯಕ ನಿರ್ದೇಶಕರು, ಗೈಡ್ಸ್ ವಿಭಾಗದಲ್ಲಿ ನಾಯಕಿಯಾಗಿ ಕುಮಾರಿ ಕೃತಿ ಚಾಂದ್ವಾನಿ ಪ್ರಾಂತೀಯ ಸಂಘಟನಾ ಆಯುಕ್ತರು ಕಾರ್ಯ ನಿರ್ವಹಿಸಿದ್ದರು.

ಡಾ॥ ಹೆಚ್.ಬಿ.ಭರಶೆಟ್ಟಿ, ಬೀದರ್, ಶ್ರೀ ರಾಜಶೇಖರ್, ಬೆಂಗಳೂರು ಉತ್ತರ, ಶ್ರೀ ಶೇಖರ್ ಡಿ, ಚಿಕ್ಕಮಗಳೂರು, ವೆಂಕಟರಾವ್, ಮಂಗಳೂರು, ಶ್ರೀ ಅಶೋಕ್ ಕುಮಾರ್, ಚಾಮರಾಜನಗರ, ಶ್ರೀ ರಾಚಯ್ಯ ನಾಶಿ, ಬೀದರ್, ಶ್ರೀ ಸಾರಣ ದೇವೇಂದ್ರ, ತಮಿಳುನಾಡು ಇವರುಗಳು ಸ್ಕೌಟ್ಸ್ ವಿಭಾಗದಲ್ಲಿ ಪರೀಕ್ಷಕರಾಗಿ ಕಾರ್ಯ ನಿರ್ವಹಿಸಿದ್ದರು.

ಗೈಡ್ಸ್ ವಿಭಾಗದಲ್ಲಿ ಶ್ರೀಮತಿ ಸುಮನ್ ಶೇಖರ್, ಉಡುಪಿ, ಶ್ರೀಮತಿ ಕಮಲಮ್ಮ, ಚಾಮರಾಜನಗರ, ಶ್ರೀಮತಿ ಬಿ.ಎನ್. ಸುರೇಖಾ, ಶ್ರೀಮತಿ ಉಷಾ ದಾಮೋದರನ್, ಶ್ರೀಮತಿ ಕಾತ್ಯಾಯಿನಿ ಕೆ.ಪಿ, ಶ್ರೀಮತಿ ಮಧುರಾ ಬಿ ಪಾಲನ್, ಶ್ರೀಮತಿ ಬಿ.ಡಿ.ಶಾಂತಾ, ಶ್ರೀಮತಿ ಪಾರ್ವತಿ, ಎಲ್.ಟಿ(ಗೈಡ್), ಕೇರಳ ಮತ್ತು ಶ್ರೀಮತಿ ಉಷಾ, ಎಲ್.ಟಿ(ಗೈಡ್), ಕೇರಳ ಇವರುಗಳು ಪರೀಕ್ಷಕರಾಗಿ ಭಾಗವಹಿಸಿದ್ದರು. ಶ್ರೀ ಎಂ ಪ್ರಭಾಕರ್ ಭಟ್, ರಾಜ್ಯ ಸಂಘಟನಾ ಆಯುಕ್ತರು(ಸ್ಕೌ), ಶ್ರೀಮತಿ ಮಂಜುಳಾ ಸಿ, ರಾಜ್ಯ ಸಂಘಟನಾ ಆಯುಕ್ತರು(ಗೈ), ಶಿಬಿರ ಸಂಘಟನೆಯಲ್ಲಿ ಸಹಕರಿಸಿದರು. ಶ್ರೀ ಪಿ.ಜಿ.ಆರ್.ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಶಿಬಿರಕ್ಕೆ ಭೇಟಿ ನೀಡಿ ಶಿಬಿರಾರ್ಥಿಗಳಿಗೆ ಶುಭ ಹಾರೈಸಿದರು.

## ರಾಷ್ಟ್ರಪತಿ ಗೈಡ್ಸ್ ಪರೀಕ್ಷಾ ಶಿಬಿರ

ರಾಷ್ಟ್ರಪತಿ ಗೈಡ್ಸ್ ಪರೀಕ್ಷಾ ಶಿಬಿರ ಅಕ್ಟೋಬರ್ 30 ರಿಂದ ನವಂಬರ್ 04ರ ವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್, ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿಯಲ್ಲಿ ಆಯೋಜಿಸಲಾಗಿತ್ತು.

ಪೂರ್ವಸಿದ್ಧತಾ ತರಬೇತಿ ಶಿಬಿರವನ್ನು ಅಕ್ಟೋಬರ್ 30ರಂದು ಆಯೋಜಿಸಲಾಗಿತ್ತು. ಶ್ರೀಮತಿ ಎನ್.ಕೆ. ಛಾಯ, ಎಲ್.ಟಿ(ಗೈ), ಇವರು ನಾಯಕತ್ವ ವಹಿಸಿದ್ದರು.

ಅಕ್ಟೋಬರ್ 31 ರಿಂದ ನವಂಬರ್ 04ರವರೆಗೆ ದಕ್ಷಿಣ ಪ್ರಾಂತೀಯ ವಲಯದ ರಾಷ್ಟ್ರಪತಿ ಗೈಡ್ಸ್ ಪರೀಕ್ಷೆ ಶಿಬಿರವು ನೆರವೇರಿತು. ಕರ್ನಾಟಕ ವತಿಯಿಂದ 199 ಹಾಗೂ ಪುದುಚೆರಿ ರಾಜ್ಯದಿಂದ 11. ಒಟ್ಟು 210 ಗೈಡ್ಸ್ 22 ಗೈಡ್ ಕ್ಯಾಪ್ಟನ್ಸ್ ಮತ್ತು 10 ಸಿಬ್ಬಂದಿ ವರ್ಗದವರು ಭಾಗವಹಿಸಿದ್ದರು. ಕುಮಾರಿ ಕೃತಿ ಚಾಂದವಾನಿ, ಆರ್.ಒ.ಸಿ(ಗೈ) ಇವರು ಪರೀಕ್ಷೆಯ ಉಸ್ತುವಾರಿ ವಹಿಸಿದ್ದರು.

ಶಿಬಿರದಲ್ಲಿ ಅಕ್ಟೋಬರ್ 31ರಿಂದ ಏಕತಾ ದಿನಾಚರಣೆಯನ್ನು ಆಚರಿಸಿ ಶ್ರೀ ಸರ್ದಾರ್ ವಲ್ಲಭಾ ಬಾಯಿ ಪಾಟೇಲರ ಸಾಧನೆ ಹಾಗೂ ಸೇವೆಯನ್ನು ಸ್ಮರಿಸಲಾಯಿತು. ಶ್ರೀಮತಿ ಮಂಜುಳ .ಸಿ., ರಾಜ್ಯ ಸಂಘಟನಾ ಆಯುಕ್ತರು(ಗೈ) ಸಂಪೂರ್ಣ ಉಸ್ತುವಾರಿ ವಹಿಸಿದ್ದರು.

## ರಾಷ್ಟ್ರಮಟ್ಟದ 37ನೇ ಲೀಡರ್ ಟ್ರೈನರ್ (ಗೈಡ್ಸ್) ತರಬೇತಿ ಶಿಬಿರ



ಅಕ್ಟೋಬರ್ 25 ರಿಂದ 29ರ ವರೆಗೆ ರಾಷ್ಟ್ರೀಯ ತರಬೇತಿ ಕೇಂದ್ರ, ಪಚ್‌ಮಡಿ, ಮಧ್ಯಪ್ರದೇಶದಲ್ಲಿ 37ನೇ ರಾಷ್ಟ್ರಮಟ್ಟದ ಲೀಡರ್ ಟ್ರೈನರ್(ಗೈಡ್ಸ್) ತರಬೇತಿ ಶಿಬಿರ ಜರುಗಿತು. ಕರ್ನಾಟಕದಿಂದ ಈ ಕೆಳಕಂಡ 14 ಶಿಬಾರಾರ್ಥಿಗಳು ಭಾಗವಹಿಸಿದ್ದರು.

ಕು. ಸಿ.ವಿ. ಕೃಪಾವಿಜಯ, ಶ್ರೀಮತಿಯರಾದ ಗಾಯಿತ್ರಿ ಗೌಡ, ಮೇರಿ ಪಿಲೋಮಿನ ಆಲ್‌ಭೆಟ್, ಕುಮಾರಿ ಹೊನ್ನಮ್ಮ, ಕಾಮೇಶ್ವರಿ, ಎನ್. ಉಮಾದೇವಿ, ಎಸ್. ಗೌರಬಾಯಿ, ಮಲ್ಲೇಶ್ವರಿ ಜುಜಿರೆ, ಶುಭಾ ವಿಶ್ವನಾಥ್, ಸುಫಲ್. ಬಿ., ಜಯವಂತಿ ಸೋನ್, ಸಿಸ್ಟರ್ ಲೂರಿನ್ ಕುಟೀನ, ಭಾರತಿ ಡಯಸ್, ವನಿತಾ ಎಂ. ರಾವ್. ಶ್ರೀಮತಿ ಪಿ. ಸರೋಜ, ಎಲ್.ಟಿ.(ಗೈ) ಇವರು ಈ ಶಿಬಿರದ ನಾಯಕರಾಗಿ ಕಾರ್ಯನಿರ್ವಹಿಸಿದರು.

## Bengaluru North

Malleshwaram Local Association Celebrated Mahatma Gandhi Jayanthi and Lal Bahadur Shastri's Birthday on 2nd October. All Faiths Prayer was organised at Sri Chamundi Scout Group in the morning. Later Scouts-Guides visited K.C. General Hospital and distributed Fruits. Mr. Narasimha Murthy, Group Leader, Senior Scouters of the Group and Smt. Jyothi LA Secretary participated. Mr. B.K. Sheshadri, District Secretary, joined the activities.

* Scouts-Guides of Vidya Mandir organised Swatch Bharat Programme at Malleshwaram Railway Station and visited Hospital and Distributed Fruits.
* Organised All faiths Prayer, Route March and Swatch Bharat Programme at various point of Yelahanka under the leadership of Mr. Mohan, LA Secretary. Mr. Prem Kumar, District Commissioner (Scouts) and Smt. Vanitha Narayan, District Commissioner joined the activities.
* Scouts - Guides of CM National School organsed a Swatch Bharat Programme at Jalahalli under the leadership of Mr. Pala Nethra.
* Shivajinagar Local Association organised All Faiths Prayer and Route March under the leadership of Miss. Krupa Vijai, Smt. Kumari Honnamma, DO visited the L.A.
* Bishop cotton Girls School Guides organised an all Faith Prayer followerd by a visit to a Childrens Home and distributed Food and Essential items under the leadership of Smt. Shail Suryavanshe, Joint Secretary.
* A Basic Course for Bunny Leaders was conducted from 22nd to 24th October Under the auspicious of Shivajinagar L.A. at Holy Angels Higher Primary School. Under the Leadership of Smt. N.K. Chaya, L.T.(G.)





Sri T.S. Lucas, President of the Location Association and Dist. Officials visited the camp. Smt. Rathanjali Nicodumus, Chairman and Sr. Sylvid, Head Mistress of school were the Chief Guest at the Validictory Function. 13 Campers participated.

## Bengaluru South



The Bharat Scouts and Guides, Bengaluru South District organized the Foundation Day programme on 7th November 2017 at Makkala Koota, Chamarajpet, Bengaluru.

Sri R. Sampath Raj, Worshipful Mayor, B.B.M.P was the Chief Guest and inaugurated the Event in the presence of Smt. Padmavathi Narasimha Murthy, Deputy Mayor.

Sri R. Sampath Raj, Worshipful Mayor in his address said that the BBMP will extend all the necessary financial support for the growth of Scouting and Guiding in the BBMP Schools and Colleges.



Sri P.C. Mohan, Hon'ble Member of Parliament, Bengaluru Central, released the Foundation Day Flag Stickers and addressed the gathering. He said that he will release funds for the infrastructure development of BBMP District Association Office.

Sri Mohammed Riswan Nawab, Ruling Party Leader, BBMP, Sri Mohan Kumar, Nominate Counselor, Sri P. Palani, District Commissioner (Scouts) were present.

Earlier Sri M. A. Chellaiah, Nodal Officer, (Scouts and Guides), BBMP in his introductory address briefed about the Foundation Day and Formation of the BBMP District Association.

Sri P.G.R. Sindhia, State Chief Commissioner, Sri Kondajji B. Shanmukhappa, Vice-President addressed the participants at the closing programme.

Sri M.S. Satheesh, District Secretary welcomed the Guests and the gathering. Sri A.S. Madhusudan, District Treasurer, Sri Anand, Member State Council were present.

Nearly 700 Scouts and Guides. Unit Leader, Local Association Representative participated in the event.

* "ಸ್ಕೌಟ್ಸ್–ಗೈಡ್ಸ್‌ನಿಂದ ಮಕ್ಕಳು ಸ್ವಾವಲಂಭನೆಯ ಜೀವನವನ್ನು ನಡೆಸುವುದನ್ನು ಕಲಿಯುತ್ತಾರೆ" ಎಂದು ಸ್ಕೌಟ್ಸ್–ಗೈಡ್ಸ್ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರ ಕುಮಾರ್ ನುಡಿದರು.

ಆನೇಕಲ್‌ನ ಸ್ಕೌಟ್ ಕಛೇರಿಯಲ್ಲಿ ಆಯೋಜಿಸಲಾಗಿದ್ದ ಭಾರತ್ ಸ್ಕೌಟ್ಸ್–ಗೈಡ್ಸ್ ಸಂಸ್ಥೆಯ ಧ್ವಜ ದಿನಾಚರಣೆ ಹಾಗೂ ಸಂಸ್ಥಾಪನಾ ದಿನಾಚರಣೆಯಲ್ಲಿ ಭಾಗವಹಿಸಿ ಅವರು ಮಾತನಾಡುತ್ತಿದ್ದರು.

* ಹೆನ್ನಾಗರದ ಸಂತ ಥಾಮಸ್ ಶಾಲೆಯಲ್ಲಿ ನಡೆದು ತಾಲ್ಲೂಕು ಮಟ್ಟದ ಪ್ರೌಢಶಾಲಾ ಮುಖ್ಯ ಶಿಕ್ಷಕರ ಸಭೆಯಲ್ಲಿಯೂ ಸಹ ಸ್ಕೌಟ್ಸ್–ಗೈಡ್ಸ್ ಸಂಸ್ಥೆಯ ಧ್ವಜ ದಿನಾಚರಣೆಯನ್ನು ಆಚರಿಸಲಾಯಿತು.

ಕ್ಷೇತ್ರ ಸಮನ್ವಯಾಧಿಕಾರಿ ಶ್ರೀ ಶಂಕರಮೂರ್ತಿ, ಸರ್ಕಾರಿ ನೌಕರರ ಸಂಘದ ತಾಲ್ಲೂಕು ಅಧ್ಯಕ್ಷ ಶ್ರೀ ವಿ.ಕೆ. ಗವಿರಂಗಯ್ಯ, ಶಿಕ್ಷಣ ಸಂಯೋಜಕ, ಶ್ರೀ ವಿ. ಪ್ರಕಾಶ್, ಕ್ಷೇತ್ರ, ಸಂಪನ್ಮೂಲ ವ್ಯಕ್ತಿ ಸರಸಿಜೋತ್ಭವ ಸ್ಕೌಟ್ಸ್‌ನ ಸ್ಥಳೀಯ ಸಂಸ್ಥೆಯ ಖಜಾಂಚಿ ಶ್ರೀ ಸಿ. ಲಕ್ಷ್ಮೀಕಾಂತರಾಜು, ಸಿ.ಆರ್.ಪಿ., ಶ್ರೀ ಮಂಜುನಾಥ್, ಸರಸ್ವತಿ ವಿದ್ಯಾಮಂದಿರ ಶಾಲೆಯ ಸ್ಕೌಟ್ ಮಾಸ್ಟರ್ ಶ್ರೀ ಆರ್. ಮುನಿರಾಜು, ಗೈಡ್ ಕ್ಯಾಪ್ಟನ್ ಶ್ರೀಮತಿ ಎಂ. ಭವ್ಯ, ಶ್ರೀ ಭಗತ್ ಸಿಂಗ್ ಮುಂತಾದವರು ಉಪಸ್ಥಿತರಿದ್ದರು.

## ಬೆಂಗಳೂರು ಗ್ರಾಮಾಂತರ

ನೆಲಮಂಗಲ ಸ್ಥಳೀಯ ಸಂಸ್ಥೆ, ಹೊಸಕೋಟೆ ಸ್ಥಳೀಯ ಸಂಸ್ಥೆ, ಸ॥ ಹಿ॥ ಪ್ರಾ॥ ಶಾಲೆ ಬೋಧನ ಹೊಸಹಳ್ಳಿ, ಸ.ಪ.ಪೂ. ಕಾಲೇಜ್ ದೇವಲಾಪುರ ಪ್ರಥಮ ದರ್ಜೆ ಕಾಲೇಜು ಹೊಸಕೋಟೆ. ಈ ಸ್ಥಳಗಳಲ್ಲಿ ಗಾಂಧಿಜಯಂತಿ ಅಂಗವಾಗಿ ಸರ್ವಧರ್ಮ ಪ್ರಾರ್ಥನೆ ಹಾಗೂ ಸ್ವಚ್ಛತಾ ಕಾರ್ಯಕ್ರಮ ನಡೆಸಲಾಗಿದ್ದು ಪದಾಧಿಕಾರಿಗಳು, ಶಿಕ್ಷಕ-ಶಿಕ್ಷಕಿಯರು, ಸ್ಕೌಟ್ಸ್-ಗೈಡ್ಸ್, ರೋವರ್ ರೇಂಜರ್ಸ್ ಈ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡಿದ್ದರು.



* ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾ ಸಂಸ್ಥೆಯ ಅಧ್ಯಕ್ಷರಾಗಿ ಆಯ್ಕೆಯಾದ ಶ್ರೀ ಎಸ್. ಪಾಲಯ್ಯ, ಭಾ.ಆ.ಸೇ., ಜಿಲ್ಲಾಧಿಕಾರಿ ಹಾಗೂ ಉಪಾಧ್ಯಕ್ಷರುಗಳಾಗಿ ಆಯ್ಕೆಯಾದ ಶ್ರೀ ಕೆ. ವಿ. ದಯಾನಂದ ಕ.ಆ.ಸೇ. ಮುಖ್ಯ ಕಾರ್ಯ ನಿರ್ವಹಣಾಧಿಕಾರಿ, ಶ್ರೀ ಅಮಿತ್ ಸಿಂಗ್, ಭಾ. ಪೋ. ಸೇ. ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿ ಮತ್ತು ಶ್ರೀ ರಮೇಶ್, ಜಿಲ್ಲಾ ಆರೋಗ್ಯಾಧಿಕಾರಿ, ಇವರುಗಳನ್ನು ಭೇಟಿ ಮಾಡಿ ಸಹಕಾರ ನೀಡಲು ಕೋರಲಾಯಿತು.



* ಸೆಪ್ಟಂಬರ್ 24 ರಂದು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಸ್ಥೆ ವತಿಯಿಂದ ರಾಜ್ಯ ಸಂಸ್ಥೆ ಕಛೇರಿಯಲ್ಲಿ ರಾಜ್ಯ ಸಂಸ್ಥೆಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್ ಸಿಂಧ್ಯ ರವರಿಗೆ ಹುಟ್ಟುಹಬ್ಬದ ಶುಭಾಶಯ ಕೋರುವ ಕಾರ್ಯಕ್ರಮವನ್ನು ಹಮ್ಮಿಕೊಂಡಿತ್ತು.



ಸಭೆಯ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಬಿ.ಕೆ. ಶಿವಪ್ಪರವರು ವಹಿಸಿದ್ದು, ಶ್ರೀಮತಿ ರಾಜಮ್ಮ ಪ್ರಕಾಶ್ ಜಿಲ್ಲಾ ಉಪಾಧ್ಯಕ್ಷರು, ಶ್ರೀ ನಾಗರಾಜ್ ಡಿ.ಸಿ. (ಎಸ್.) ಶ್ರೀಮತಿ ಆರ್. ವಿಜಯಕುಮಾರಿ ಡಿ.ಸಿ.(ಜಿ) ಶ್ರೀ ಡಿ. ಶ್ರೀನಿವಾಸ್ ಪ್ರಸಾದ್, ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಸಿ. ಗೋಪಾಲಸ್ವಾಮಿ, ಜಿಲ್ಲಾ ಖಜಾಂಚಿ ಶ್ರೀ ಯಶ್ವಂತ್, ಜಿಲ್ಲಾ ಹಣಕಾಸು ಸಮಿತಿ, ಶ್ರೀ ಕೆ.ಎನ್. ನಾಗೇಶ್ ಸಹಕಾರ್ಯದರ್ಶಿ ಶ್ರೀ ಪ್ರಕಾಶ್, ಜಿಲ್ಲಾ ಸಮಿತಿ ಸದಸ್ಯರು ಶ್ರೀ ಕೆ. ಜವರಯ್ಯ(ಡಿ.ಓಸಿ..) ಶ್ರೀ ಶಂಕರ್ ಆರ್. ಕಾಂಬ್ಳೆ (ಡಿ.ಓ.) ಶ್ರೀಮತಿ ಬೇಬಿ ನಾಯಕ್ ರವರು ಹಾಗೂ ವಿಜಯಪುರ ತಾಲ್ಲೂಕು ಹೋರಾಟ ಸಮಿತಿಯವರು ಹಾಜರಿದ್ದು ಫಲಪುಷ್ಪ ನೀಡಿ ಸನ್ಮಾನಿಸಲಾಯಿತು.

## ಬಳ್ಳಾರಿ



ಬಳ್ಳಾರಿ ನಗರದ ಸಂತ ಜೋಸಫ್ ಬಾಲಕರ ಪ್ರೌಢಶಾಲೆಯಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯಿಂದ ಸಂಸ್ಥಾಪನಾ ದಿನಾಚರಣೆ ಹಾಗೂ ಧ್ವಜ ಚೀಟಿ ಬಿಡುಗಡೆ ಕಾರ್ಯಕ್ರಮ ನೆರವೇರಿಸಲಾಯಿತು. ಈ ಕಾರ್ಯಕ್ರಮದಲ್ಲಿ ಅಧ್ಯಕ್ಷರಾದ ಫಾದರ್ ಲೂರ್ದರಾಜ್ ರವರು ಮಾತನಾಡುತ್ತ ದೇಶದ ಭವಿಷ್ಯದ ಬಗ್ಗೆ ಇಲ್ಲಿ ಶಿಕ್ಷಣ ನೀಡುತ್ತಾರೆ ಅಲ್ಲದೇ ಸಮಾಜ ದೇಶಕಟ್ಟುವಲ್ಲಿ ಈ ಸ್ಕೌಟ್ ಗೈಡ್ ಸಂಸ್ಥೆ ಬಹಳ ಸಹಕಾರಿಯಾಗಿದೆ ಎಂದರು. ಶ್ರೀ ನಾಗರಾಜ, ಉಪನಿರ್ದೇಶಕರು, ಪದವಿ ಪೂರ್ವ ಶಿಕ್ಷಣ

ಇಲಾಖೆ ಇವರು ಸ್ಕೌಟ್ಸ್-ಗೈಡ್ಸ್‌ಗಳು ಇತರ ಮಕ್ಕಳಿಗಿಂತ ಭಿನ್ನವಾಗಿರುತ್ತೀರಿ. ಇಲ್ಲಿ ಶಿಕ್ಷಣ ಪಡೆಯುವ ನೀವು ಧನ್ಯರೆಂದು ಶ್ಲಾಘಿಸಿದರು. ಉಪನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಧ್ವಜ ಚೀಟಿ ಬಿಡುಗಡೆಗೊಳಿಸಿದರು. ಅಧ್ಯಕ್ಷತೆ ವಹಿಸಿದ ಶ್ರೀ ಕುಪ್ಪಗಲ್ಲು ವೀರೇಶ್ ರವರು ಮಕ್ಕಳಿಗೆ ಶುಭಕೋರಿದರು. ಶ್ರೀ ನಾಗರಾಜ್.ಎಂ. ಡಿ.ಓ.ಸಿ., ಸ್ವಾಗತ ಕೋರಿದರೆ. ಶ್ರೀ ಚಂದ್ರಯ್ಯ ಮಠದ್, ಸ್ಥಳೀಯ ಕಾರ್ಯದರ್ಶಿಗಳು ವಂದಿಸಿದರು. ಈ ಕಾರ್ಯಕ್ರಮದಲ್ಲಿ ಶ್ರೀ ವಿಜಯಸಿಂಹ, ಜಿಲ್ಲಾ ಕಾರ್ಯದರ್ಶಿಗಳು, ಬಳ್ಳಾರಿ ಇವರು ಭಾಗವಹಿಸಿದ್ದರು. ಇದೇ ಸಂದರ್ಭದಲ್ಲಿ ಸ್ಕೌಟ್‌ಗಳಿಂದ ಸೈಕಲ್ ಜಾಥಾವನ್ನು ಏರ್ಪಡಿಸಲಾಗಿತ್ತು.

* ನವೆಂಬರ್ 11 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ, ಹೊಸಪೇಟೆ ಇವರ ವತಿಯಿಂದ ಪಿ.ಬಿ.ಎಸ್. ಅಂಡ್ ಸನ್ಸ್, ಸ.ಹಿ.ಪ್ರಾ.ಶಾಲೆ ಚಿತ್ತವಾಡ್ಗಿ, ಹೊಸಪೇಟೆ, ಇಲ್ಲಿ ಸ್ಕೌಟ್ಸ್-ಗೈಡ್ಸ್ ಸಂಸ್ಥಾಪನಾ ದಿನಾಚರಣೆ ಹಾಗೂ ದ್ವಿತೀಯ ಸೋಪಾನ ಪರೀಕ್ಷಾ ಶಿಬಿರ ಹಮ್ಮಿಕೊಳ್ಳಲಾಗಿತ್ತು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಹೆಚ್. ಶ್ರೀನಿವಾಸರಾವ್, ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರು ವಹಿಸಿಕೊಂಡಿದ್ದರು. ಶ್ರೀಮತಿ ಭಾಗ್ಯಲಕ್ಷ್ಮೀ ಬರಾಡೆ ಉಪಾಧ್ಯಕ್ಷರು, ಶ್ರೀಮತಿ ರತ್ನಾದತ್ತ ಉಪಾಧ್ಯಕ್ಷರು, ಶ್ರೀ ಪಿ. ಮಂಜುನಾಥ, ಡಿ.ಟಿ.ಸಿ.(ಸ್ಕೌಟ್) ಶ್ರೀಮತಿ ಜಯಶ್ರೀಜೋಶಿ, ಡಿ.ಟಿ.ಸಿ. (ಗೈಡ್), ಶ್ರೀ ಕೆ. ರಾಜಶೇಖರ್ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ, ಶ್ರೀ ತಿಪ್ಪೇಸ್ವಾಮಿ, ಖಜಾಂಚಿ, ಶ್ರೀ ಧನರಾಜ್ ಮುಖ್ಯಗುರುಗಳು ಹಾಗೂ ವಿವಿಧ ಶಾಲೆಗಳಿಂದ ಆಗಮಿಸಿದ 20 ಶಿಕ್ಷಕರು, 129 ಸ್ಕೌಟ್ಸ್, 90 ಗೈಡ್ಸ್ ಭಾಗವಹಿಸಿದ್ದರು.



ಈ ಸಂದರ್ಭದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥಾಪನ ದಿನದ ಅಂಗವಾಗಿ ಸ್ಕೌಟ್ಸ್-ಗೈಡ್ಸ್ ಧ್ವಜಚೀಟಿಗಳನ್ನು ಬಿಡುಗಡೆ ಮಾಡಲಾಯಿತು. ನಂತರ ದ್ವಿತೀಯ ಸೋಪಾನ್ ಪರಿಕ್ಷಾ ಶಿಬಿರ ನಡೆಸಲಾಯಿತು. ಸ್ಕೌಟ್ಸ್ ವಿಭಾಗಕ್ಕೆ ಶ್ರೀ ಪಿ. ಮಂಜುನಾಥ ಡಿ.ಟಿ.ಸಿ. (ಸ್ಕೌಟ್ಸ್), ಗೈಡ್ಸ್ ವಿಭಾಗಕ್ಕೆ ಶ್ರೀಮತಿ ಜಯಶ್ರೀಜೋಶಿ ಡಿ.ಟಿ.ಸಿ.(ಗೈಡ್ಸ್) ನಾಯಕರಾಗಿದ್ದರು.

## ಬೆಳಗಾವಿ

ನವೆಂಬರ್ 7 ರಂದು ಕೆ.ಎಲ್.ಇ. ಮಹಾದೇವಪ್ಪಣ್ಣಾ ಮುನವಳ್ಳಿ ಶಾಲೆಯಲ್ಲಿ 'ಭಾರತ್ ಸ್ಕೌಟ್-ಗೈಡ್ ಧ್ವಜಚೀಟಿಗಳ ಬಿಡುಗಡೆಯ ಕಾರ್ಯಕ್ರಮವು ಶ್ರೀ ಡಿ.ಬಿ. ಅತ್ತಾರ,ಜಿಲ್ಲಾ ಸಂಘಟಿಕರು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ಬೆಳಗಾವಿ ಇವರ ಅಧ್ಯಕ್ಷತೆಯಲ್ಲಿ ಜರುಗಿತು. ಜಿಲ್ಲಾ ಗೈಡ್ ತರಬೇತುದಾರರಾದ ಕುಮಾರಿ ಲಕ್ಷ್ಮೀ ಮಂಗಿ ಹಾಗೂ ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ ಅನುಪಾ ಕೌಶಿಕ್ ಅವರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ಕುಮಾರ ಸೃಜನ ಪಾಟೀಲ, ಅಪೇಕ್ಷಾ ಪಟ್ಟಣಶೆಟ್ಟಿ ಮತ್ತು ಯಶಸ್ವಿನಿ ನಂದಗಾವಿ ಇವರು ಸ್ಕೌಟ್ ಮತ್ತು ಗೈಡ್ ಬೆಳೆದು ಬಂದ ಹಾದಿ ಹಾಗು ಅದರ ಮಹತ್ವದ ಕುರಿತು ಮಾತನಾಡಿದರು. ಕುಮಾರ ಗೋವಿಂದ ಕಪರಟ್ಟಿ, ಪ್ರಜ್ವಲ್ ಮಟ್ಟಿಕಲಿ ಮತ್ತು ವಿನಾಯಕ ತೇಲಿ ಕಬ್ಸ್ ಚಳುವಳಿಯ ಬಗ್ಗೆ ಮಾತನಾಡಿದರು. ಕುಮಾರ್ ಸಾಯಿರಾಜ್ ಎಸ್. ಪಾಟೀಲ್ ಅತಿಥಿಗಳನ್ನು ಪರಿಚಯಿಸಿ, ಸ್ವಾಗತಿಸಿದರೆ, ಕುಮಾರಿ ಸ್ನೇಹಲ್ ಬಗಾಡೆ ವಂದನಾರ್ಪಣೆಗೈದಳು.

ಕಾರ್ಯಕ್ರಮದಲ್ಲಿ ಸ್ಕೌಟ್ ಮಾಸ್ಟರ್ ಶ್ರೀ ಪಿ. ವಾಯ್. ಪಾಟೀಲ್, ಗೈಡ್ ಕ್ಯಾಪ್ಟನ್ ಶ್ರೀಮತಿ ಸುಜಾತಾ ತೊಂಡಿಕಟ್ಟಿ, ಕಬ್ ಮಾಸ್ಟರ್ ಶ್ರೀಮತಿ ಚೇತನಾ ಪಾಟೀಲ ಮತ್ತು ಫ್ಲಾಕ್ ಲೀಡರ್ ನಂದಾದೀಪ ಪವಾರ ಉಪಸ್ಥಿತರಿದ್ದರು.





ನವೆಂಬರ್ 7 ರಿಂದ 13 ರ ವರೆಗೆ ಸ್ಕೌಟ್ ಮತ್ತು ಗೈಡ್, ಕಬ್-ಬುಲ್‌ಬುಲ್‌ಗಳಿಗಾಗಿ ಕೆ.ಎಲ್.ಇ. ಮಹಾದೇವಪ್ಪಣ್ಣಾ ಮುನವಳ್ಳಿ ಶಾಲೆಯಲ್ಲಿ ವಿವಿಧ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿತ್ತು.

## ಬೀದರ್



ಅಕ್ಟೋಬರ್ 6 ರಂದು ಸರಕಾರಿ ಪ್ರೌಢಶಾಲೆ, ಮರ್ಕಿಯಲ್ಲಿ ಸ್ಕೌಟ್ಸ್-ಗೈಡ್ಸ್ ದಳವನ್ನು ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಬಾಬುರಾವ ನಿಂಬೂರೆ ರವರು ಉದ್ಘಾಟಿಸಿ ಮಾತನಾಡುತ್ತಾ, ಸ್ಕೌಟ್ ಆದ ಮೇಲೆ ಒಬ್ಬ, ಸ್ಕೌಟ್ ತನ್ನ ದೇಶಕ್ಕೆ, ತನಗೆ ಮತ್ತು ಇತರರಿಗಾಗಿ ತನ್ನ ಸೇವೆ ಸಮರ್ಪಣೆ ಮಾಡಬೇಕಾದ ಮೂರು ಸಿದ್ಧಾಂತಗಳಾಗಿವೆ. ಮತ್ತು ವಿದ್ಯಾರ್ಥಿಗಳು ದೈಹಿಕವಾಗಿ, ಮಾನಸಿಕವಾಗಿ, ಆಧ್ಯಾತ್ಮಿಕವಾಗಿ ಪ್ರಗತಿ ಹೊಂದಲು, ಸ್ಕೌಟ್ಸ್-ಗೈಡ್ಸ್ ತರಬೇತಿಯಿಂದ ಸಾಧ್ಯವಾಗುತ್ತದೆ" ಎಂದರು.

ಸ್ಕೌಟ್ಸ್-ಗೈಡ್ಸ್ ಇತಿಹಾಸ, ಲಾರ್ಡ್ ಬೇಡನ್ ಪೋವೆಲ್‌ರ ಜೀವನದ ಬಗ್ಗೆ ಶ್ರೀ ಶಿವಕುಮಾರ ಮೇಣಸೆ, ಸ್ಥಳೀಯ ಕಾರ್ಯದರ್ಶಿಗಳು, ಶ್ರೀ ಔರಾದ್‌ರವರು ವಿವರ ನೀಡಿದರು.

ಶ್ರೀ ನಬಿ ಸಿ. ಬಾಗವಾನ (ಹೆಚ್.ಡಬ್ಲ್ಯೂ.ಬಿ.) ಸ್ಕೌಟ್ ಮಾಸ್ಟರ್ ರವರು ಮಾತನಾಡಿ ಒಬ್ಬ ವಿದ್ಯಾರ್ಥಿಯು ಯಶಸ್ವಿಯಾಗುವ ಮೊದಲ ಹೆಜ್ಜೆ ಶಿಸ್ತು ಆಗಿದೆ ಎಂದರು. ಸ್ಕೌಟ್ ಮಾಸ್ಟರ್ ಶ್ರೀ ವಿಜಯಕುಮಾರ್ ಸ್ವಾಗತಿಸಿದರು. ಶ್ರೀ ಅರವಿಂದ ಬಿರಾದರ ನಿರೂಪಿಸಿದರು. ಮುಖ್ಯ ಗುರುಗಳಾದ ಶ್ರೀ ಸುಧಾಕರ್‌ರವರು ಅಧ್ಯಕ್ಷತೆ ವಹಿಸಿದ್ದರು.

* ನವೆಂಬರ್ 1 ಕನ್ನಡ ರಾಜ್ಯೋತ್ಸವದಂದು ಬೀದರ್ ನಗರದ ನೆಹರೂ ಸ್ಟೇಡಿಯಂನಲ್ಲಿ ಸ್ಕೌಟ್ಸ್-ಗೈಡ್ಸ್‌ನ ಧ್ವಜ ಚೀಟಿಯನ್ನು ಪೌರಾಡಳಿತ ಸಚಿವ ಶ್ರೀ ಈಶ್ವರ ಖಂಡ್ರೆಯವರು ಬಿಡುಗಡೆ ಮಾಡಿದರು. ಈ ಸಂದರ್ಭದಲ್ಲಿ ರಾಜ್ಯ ಉಗ್ರಾಣ ನಿಗಮ ಅಧ್ಯಕ್ಷ ಶ್ರೀ ರಹೀಂ ಖಾನ್, ವಿಧಾನ ಪರಿಷತ್ ಸದಸ್ಯ ಶ್ರೀ ಅಜಯಸಿಂಗ್, ಬೀದರ್ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಶ್ರೀ ಸಂಜಯ ಜಾಗಿರದಾರ, ನಗರಸಭೆಯ ಅಧ್ಯಕ್ಷೆ ಶ್ರೀಮತಿ ಶಾಲಿನಿ ಚಿಂತಾಮಣಿ, ಜಿಲ್ಲಾ ಪಂಚಾಯತ್ ಅಧ್ಯಕ್ಷೆ ಶ್ರೀಮತಿ ಭಾರತಬಾಯಿ ಸೇರಿಕಾರ, ಉಪಾಧ್ಯಕ್ಷ ಡಾ. ಪ್ರಕಾಶ ಪಾಟೀಲ, ಕರ್ನಾಟಕ ಸರಕಾರದ ಕಂಠೀರವ ಸ್ಟೇಡಿಯಂ ಅಧ್ಯಕ್ಷೆ ಶ್ರೀಮತಿ ಮೀನಾಕ್ಷಿ ಸಂಗ್ರಾಮ, ಜಿಲ್ಲಾಧಿಕಾರಿಗಳಾದ ಡಾ. ಹೆಚ್.ಸಿ. ಮಹಾದೇವ, ಜಿ.ಪಂ. ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಾದ ಶ್ರೀ ಸೆಲ್ವಮಣಿ, ಜಿಲ್ಲಾ ಉಪನಿರ್ದೇಶಕರು ಸಾ.ಶಿ. ಇಲಾಖೆ, ಶ್ರೀ ಇನಾಯತ ಅಲಿ ಸಿಂಧೇ, ಬೀದರನ ಸ್ಕೌಟ್ಸ್-ಗೈಡ್ಸ್‌ನ ಜಿಲ್ಲಾ ಮುಖ್ಯ ಆಯುಕ್ತೆ ಶ್ರೀಮತಿ ಗುರಮ್ಮ ಸಿದ್ದಾರೆಡ್ಡಿ, ಗೈಡ್ ಆಯುಕ್ತೆ ಶ್ರೀಮತಿ ಲೀಲಾವತಿ ಚಕೋತೆ ಹಾಗೂ ಇತರರು ಹಾಜರಿದ್ದರು.

## ಚಾಮರಾಜನಗರ



"ಸ್ಕೌಟ್ಸ್-ಗೈಡ್ಸ್ ಎಂಬುದು ಸ್ವಯಂ ಪ್ರೇರಣೆಯಾಗಿ ಬಂದು ಸೇವೆ ಸಲ್ಲಿಸುವುದು. ನಾವು ಭೂಮಿಯಲ್ಲಿ ಹಣ್ಣುಕೊಡುವ ಬೀಜಗಳನ್ನು ಬಿತ್ತನೆ ಮಾಡಿದರೆ ಅದರಲ್ಲಿ ಕೆಲವೊಂದು ಗಿಡಗಳು ಮಾತ್ರ ಒಳ್ಳೆಯ ಹಣ್ಣು ಕೊಡಲು ಸಾಧ್ಯ. ಹಾಗೇ ನೀವುಗಳು ಇಲ್ಲಿ ಬಂದು ಸೇರಿರುವುದು ಜರಡಿ ಹಿಡಿದ ಡೈಮಂಡ್‌ಗಳು. ನೀವು ನಿಮ್ಮಮಕ್ಕಳನ್ನು ಶೇಪ್ ಮಾಡುವ ಹಾಗೂ ಸೇವೆಯಲ್ಲಿ ತೊಡಗಿಸುವ ಜವಾಬ್ದಾರಿ ನಿಮ್ಮ ಕೈಯಲ್ಲಿದೆ" ಎಂದು ಡಾ॥ ಶ್ವೇತಾ ಶ್ರೀಧರ್, ಜಿಲ್ಲಾ ಆಯುಕ್ತರು (ಗೈ). ತಿಳಿಸಿದರು.

ಅವರು ನವೆಂಬರ್ 7 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥಾಪನಾ ದಿನಾಚರಣೆಯಂದು ಸಂಸ್ಥೆಯ ಧ್ವಜ ಚೀಟಿ ಬಿಡುಗಡೆ ಮಾಡಿ ಮಾತನಾಡಿದರು.ಈ ಸಂದರ್ಭದಲ್ಲಿ ಶ್ರೀ ವಿ.ಎಂ. ರಾಮಚಂದ್ರ, ಜಿಲ್ಲಾ ಕಾರ್ಯದರ್ಶಿ, ಶ್ರೀ ಬಿ. ಷರಾಫ್ ಮಾದಪ್ಪ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀ ಕೆ.ಎಸ್. ಮಹದೇವಸ್ವಾಮಿ, ಜಿಲ್ಲಾ ತರಬೇತಿ ಆಯುಕ್ತರು, ಜಿಲ್ಲಾ ಸಂಘಟಿಕರಾದ ಶ್ರೀಮತಿ ಪಿ. ಕಮಲಮ್ಮ, ಶ್ರೀ ಎನ್. ಅಶೋಕ್ ಕುಮಾರ್ ಹಾಗೂ ಜಿಲ್ಲಾ ಸ್ಕೌಟರ್ಸ್/ಗೈಡರ್ಸ್‌ಗಳು ಹಾಜರಿದ್ದರು.

* ಅಕ್ಟೋಬರ್ 2 ರಿಂದ 8 ರ ವರೆಗೆ ಚಾಮರಾಜನಗರದಲ್ಲಿ ಮೂಲತರಬೇತಿ ಹಮ್ಮಿಕೊಳ್ಳಲಾಗಿತ್ತು. ಈ ಶಿಬಿರದಲ್ಲಿ ಒಟ್ಟು 63 ಶಿಕ್ಷಕ / ಶಿಕ್ಷಕಿಯರು ಭಾಗವಹಿಸಿದ್ದರು. ಕಬ್ ವಿಭಾಗಕ್ಕೆ ಶ್ರೀ ಕೃಷ್ಣಮೂರ್ತಿ, ಸ್ಕೌಟ್ ಮಾಸ್ಟರ್ ವಿಭಾಗಕ್ಕೆ ಶ್ರೀ ವಿ.ಎಂ. ರಾಮಚಂದ್ರ, ಫ್ಲಾಕ್ ಲೀಡರ್ ವಿಭಾಗಕ್ಕೆ ಶ್ರೀಮತಿ ಎಂ.ಎನ್. ನಾಗರತ್ನಮ್ಮ, ಗೈಡ್ ವಿಭಾಗಕ್ಕೆ ಶ್ರೀಮತಿ ಪಿ. ಕಮಲಮ್ಮನವರು ನಾಯಕತ್ವ ವಹಿಸಿಕೊಂಡಿದ್ದು, ಜಿಲ್ಲಾ ಆಯುಕ್ತರು(ಸ್ಕೌಟ್) ಆದ ಶ್ರೀ ಬಿ. ಷರಾಫ್ ಮಾದಪ್ಪ, ಹಾಗೂ ಜಿಲ್ಲಾ ಆಯುಕ್ತರು(ಗೈಡ್) ಆದ ಡಾ. ಶ್ವೇತ ಶಶಿಧರ್‌ರವರು ಮುಕ್ತಾಯ ಸಮಾರಂಭದಲ್ಲಿ ಹಾಜರಿದ್ದರು. ಅಕ್ಟೋಬರ್ 7 ರಂದು ಭವ್ಯ ಶಿಬಿರಾಗ್ನಿ ಕಾರ್ಯಕ್ರಮವನ್ನು ನವೋದಯ ಶಾಲೆಯ ಪ್ರಾಂಶುಪಾಲರಾದ ಶ್ರೀ ಡ್ಯಾನಿಯಲ್ ರತ್ನಕುಮಾರ್ ರವರು ಉದ್ಘಾಟಿಸಿದರು.





* ಸೆಪ್ಟಂಬರ್ 23 ರಂದು ಡಿ.ಡಿ.ಪಿ.ಐ. ಕಛೇರಿ ಸಭಾಂಗಣದಲ್ಲಿ ಜಿಲ್ಲಾ ಮಟ್ಟದ ಸ್ಕೌಟರ್ ಮತ್ತು ಗೈಡರ್ ಸಭೆ ಜರುಗಿತು. ಸುಮಾರು 60 ಸ್ಕೌಟರ್ ಮತ್ತು ಗೈಡರ್ ಭಾಗವಹಿಸಿದ್ದರು. ಈ ಸಭೆಯಲ್ಲಿ ಜಿಲ್ಲಾ ಮಟ್ಟದ ಕಾರ್ಯಕ್ರಮ, ಕರ್ನಾಟಕದರ್ಶನ, ಜಿಲ್ಲಾ ರ್‍ಯಾಲಿ, ಮೂಲ ತರಬೇತಿ, ದಳ ನೊಂದಾವಣಿ ಹಾಗೂ ವಾರೆಂಟ್ ಮತ್ತು ಚಾರ್ಟರ್ ಬಗ್ಗೆ ತಿಳಿಸಲಾಯಿತು. ಶ್ರೀ ಬಿ. ಷರಾಫ್ ಮಾದಪ್ಪ ಜಿಲ್ಲಾ ಆಯುಕ್ತರು (ಸ್ಕೌಟ್) ಅಧ್ಯಕ್ಷತೆ ವಹಿಸಿದ್ದರು. ಇದೇ ಸಂದರ್ಭದಲ್ಲಿ ವಿಶ್ವ ಶಾಂತಿ ದಿನಾಚರಣೆಯನ್ನು ಆಚರಿಸಲಾಗಿತ್ತು.

## ಚಿತ್ರದುರ್ಗ

ನವೆಂಬರ್ 11 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ಚಿತ್ರದುರ್ಗ ವತಿಯಿಂದ ಜಿಲ್ಲಾ ಸಂಸ್ಥೆಯಲ್ಲಿ 62ನೇ ಕನ್ನಡ ರಾಜ್ಯೋತ್ಸವವನ್ನು ಆಚರಿಸಲಾಯಿತು. ಈ ಸಮಾರಂಭದಲ್ಲಿ ಡಾ॥ ರಹಮತ್‌ಉಲ್ಲಾ, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಪ್ರಭಾರ ಹಾಗೂ ಜಿಲ್ಲಾ ಸಹ ಕಾರ್ಯದರ್ಶಿ, ಇವರು ಕನ್ನಡ ನಾಡು, ನುಡಿ, ಸಂಸ್ಕೃತಿ ಬಗ್ಗೆ ಮಾತನಾಡಿದರು. ಶ್ರೀ ಅನ್ವರ್ ಪಾಷಾ, ಜಿಲ್ಲಾ ಖಜಾಂಚಿ, ಶ್ರೀ ಸಿ.ಆರ್. ಮಹಮದ್ ಮೊಹಿನುದ್ದೀನ್, ಎ.ಡಿ.ಸಿ.(ಸ್ಕೌಟ್ಸ್) ಶ್ರೀ ಸಿ.ಎನ್. ಮಹೇಶ್

ಡಿ.ಟಿ.ಸಿ. (ಸ್ಕೌಟ್ಸ್) ಶ್ರೀ ಬಿ. ಚಂದ್ರಶೇಖರ್ ಟ್ರೈನಿಂಗ್ ಕೌನ್ಸಿಲರ್, ಶ್ರೀ ಪರಮೇಶ್ವರವರು ಆಜೀವ ಸದಸ್ಯರು, ಶ್ರೀಮತಿ ಡಿ. ಪದ್ಮಾವತಿ, ಶ್ರೀ ಹೊನ್ನಪ್ಪ, ಕಛೇರಿ ಸಿಬ್ಬಂದಿ, ಹಾಗೂ ಇತರರು ಭಾಗವಹಿಸಿದ್ದರು. ಶ್ರೀ ಜಿ. ಗುರುಮೂರ್ತಿ ಜಿಲ್ಲಾ ಸಂಘಟಕರು ಸ್ವಾಗತಿಸಿದರು. ಶ್ರೀ ಟಿ. ಕರಿಸಿದ್ದಪ್ಪ ಜಿಲ್ಲಾ ಸಂಘಟಕರು ವಂದಿಸಿದರು.

* ಅಕ್ಟೋಬರ್ 25 ರಂದು ಚಿತ್ರದುರ್ಗ ಜಿಲ್ಲೆಯ, ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳ ಸಭೆಯಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ಭಾಗವಹಿಸಿ ಮಾತನಾಡುತ್ತಾ "ಎವೆರಿಡೇ ಈಸ್ ರನ್ನಿಂಗ್ ಡೇ" ಎಂಬಂತೆ ಎಲ್ಲಾ ತಾಲ್ಲೂಕುಗಳಲ್ಲಿ ಯಾವಾಗಲೂ ಯವುದಾದರೂ ಸ್ಕೌಟ್ಸ್-ಗೈಡ್ಸ್ ಕಾರ್ಯಕ್ರಮಗಳು ನಡೆಯುತ್ತಲೇ ಇರಬೇಕು, ಪ್ರತಿ ತಾಲ್ಲೂಕಿಗೆ ಈ ವರ್ಷ ರೂ. 50 ಸಾವಿರ ಅನುದಾನ ನೀಡುವುದಾಗಿ ಹೇಳಿದರು. ಇದೇ ಸಂದರ್ಭದಲ್ಲಿ ರಾಜ್ಯ ಮುಖ್ಯ ಆಯುಕ್ತರಾಗಿ ಪುನರ್ಆಯ್ಕೆ ಆದ ಪ್ರಯುಕ್ತ ಜಿಲ್ಲಾ ಸಂಸ್ಥೆಯಿಂದ ಅವರನ್ನು ಸನ್ಮಾನಿಸಲಾಯಿತು.



ಶ್ರೀ ಎಂ. ರೇವಣಸಿದ್ದಪ್ಪ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಮತ್ತು ಜಿಲ್ಲಾ ಮುಖ್ಯ ಆಯುಕ್ತರು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಇವರು ಮಾತನಾಡಿ ನಾವು ನಮ್ಮ ಜಿಲ್ಲೆಯಲ್ಲಿ ಹಲವು ಕಾರ್ಯಕ್ರಮಗಳನ್ನು ಮಾಡಿದ್ದೇವೆ. ಇನ್ನು ಹೆಚ್ಚು ಕಾರ್ಯಕ್ರಮಗಳನ್ನು ಮಾಡುತ್ತೇವೆ ಎಂದು ನುಡಿದರು.

ಶ್ರೀ ಬಿ.ಎ. ಲಿಂಗಾರೆಡ್ಡಿ ಜಿಲ್ಲಾ ಕಾರ್ಯದರ್ಶಿಗಳು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ, ಚಿತ್ರದುರ್ಗ ಇವರು ಮಾತನಾಡಿ ನಮ್ಮ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಕಾರ್ಯಕ್ರಮಗಳು ನಡೆಯುತ್ತಿವೆ. ಈ ಬಾರಿ ಇನ್ನು ಹೆಚ್ಚಿನ ಕಾರ್ಯಕ್ರಮಗಳನ್ನು ನಡೆಸಿ ಹೆಚ್ಚಿನ ಶಿಕ್ಷಕರಿಗೆ ತರಬೇತಿಗಳನ್ನು ನೀಡಿ ನಮ್ಮ ಜಿಲ್ಲೆಯನ್ನು ಉನ್ನತ ಮಟ್ಟಕ್ಕೆ ತರಲು ಪ್ರಯತ್ನಿಸುತ್ತೇವೆ ಎಂದರು.

## ಚಿಕ್ಕಮಗಳೂರು

ಭಾರತ್ ಸ್ಕೌಟ್ಸ್-ಗೈಡ್ಸ್ ಸಪ್ತಾಹದ ಅಂಗವಾಗಿ ರತ್ನಗಿರಿ ಬೋರೆ ಮತ್ತು ಸುತ್ತಮುತ್ತಲಿನ ಪ್ರದೇಶದಲ್ಲಿ ಸ್ವಚ್ಛತಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಶಾಲಾ ಮುಖ್ಯಸ್ಥ ಶ್ರೀ ಎಂ.ಎನ್. ಷಡಕ್ಷರಿ ಕಾರ್ಯಕ್ರಮವನ್ನು ಉದ್ಘಾಟಿಸಿ, ಸ್ವಚ್ಛತಾ ಕಾರ್ಯಕ್ರಮ ಮತ್ತು ಶ್ರಮದಾನಗಳು ದಿನನಿತ್ಯದ ಚಟುವಟಿಕೆಯಾಗಬೇಕೇ ಹೊರತು ಕೇವಲ ಸಾಂಕೇತಿಕವಾಗಬಾರದು ಎಂದರು. ಶಾಲಾ ಮುಖ್ಯಸ್ಥ ಶ್ರೀ ಅಬ್ದುಲ್ ಮಲ್ಲಿಕ್ ಮತ್ತಿತರರು ಸ್ವಚ್ಛತಾ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.



*"ಇತ್ತೀಚಿನ ದಿನಗಳಲ್ಲಿ ಎಳೆಯರು ಹೆಚ್ಚು ಹೆಚ್ಚಾಗಿ ಕಂಪ್ಯೂಟರ್ ಮತ್ತು ವಿಡಿಯೋ ಗೇಮ್‌ಗಳ ವ್ಯಸನಿಗಳಾಗಿದ್ದು, ಇದರಿಂದ ದೇಹದ ಬೆಳವಣಿಗೆ ಕುಂಠಿತವಾಗಿ ಮಾನಸಿಕ ಸ್ವಾಸ್ಥತೆ ಕೆಡುತ್ತದೆ" ಎಂದು ಜಿಲ್ಲಾ ಗೈಡ್ಸ್ ಆಯುಕ್ತೆ ಶ್ರೀಮತಿ ಅನಿತಾ ನಾಗೇಂದ್ರ ನುಡಿದರು. ಅವರು ಉಪ್ಪಳ್ಳಿಯ ಮಾಡೆಲ್ ಇಂಗ್ಲಿಷ್ ಪ್ರೌಢಶಾಲೆಯಲ್ಲಿ ಆಯೋಜಿಸಲಾಗಿದ್ದ ಸ್ಕೌಟ್ಸ್-ಗೈಡ್ಸ್ ಸಪ್ತಾಹದ ಸಮಾರೋಪ ಸಮಾರಂಭದಲ್ಲಿ ಭಾಗವಹಿಸಿ ಮಾತನಾಡುತ್ತಿದ್ದರು. ಅಧ್ಯಕ್ಷತೆ ವಹಿಸಿದ್ದ ಶಾಲಾ ಮುಖ್ಯಸ್ಥ ಮತ್ತು ಚಿಕ್ಕಮಗಳೂರು ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎಂ.ಎನ್. ಷಡಕ್ಷರಿ ಮಾತನಾಡಿ, ಸ್ಕೌಟ್ಸ್ ಸಪ್ತಾಹವನ್ನು ಸಾರ್ವಜನಿಕರ ಗಮನವನ್ನು ಚಳುವಳಿಯ ಚಟುವಟಿಕೆಗಳ ಬಗ್ಗೆ ಸೆಳೆಯಲು ಆಚರಿಸಲಾಗುವುದು ಎಂದರು.

ಸಪ್ತಾಹದ ಅಂಗವಾಗಿ ಬೇಡನ್ ಪೋವೆಲ್ ರವರ ಮತ್ತು ಲೇಡಿ ಬೇಡನ್ ಪೋವೆಲ್ ರವರ ಚಿತ್ರ ರಚನೆ, ಧ್ವಜಸ್ತಂಭ ನಿರ್ಮಾಣ, ಅಡುಗೆ ಮಾಡುವುದು, ಕಸೂತಿ ಕಲೆ, ಕರಕುಶಲ ಮತ್ತಿತರ ಸ್ಪರ್ಧೆಗಳನ್ನು ಏರ್ಪಡಿಸಿ ಬಹುಮಾನ ನೀಡಲಾಯಿತು.

## ದಕ್ಷಿಣ ಕನ್ನಡ

ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ, ಉಳ್ಳಾಲ ವತಿಯಿಂದ ತೊಕ್ಕೊಟು ಬಸ್ ನಿಲ್ದಾಣದಲ್ಲಿ ನಿರಂತರ ಸ್ವಚ್ಛತಾ ಕಾರ್ಯಕ್ರಮದ ಅಂಗವಾಗಿ ಸ್ವಚ್ಛತೆ ನಡೆಯಿತು. ಕೋಣಾಜೆಯ ವಿಶ್ವಮಂಗಳ ಪ್ರೌಢಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ನವೆಂಬರ್ 4 ರಂದು ನಡೆದ ಈ ಕಾರ್ಯಕ್ರಮದಲ್ಲಿ 20 ಸ್ಕೌಟ್ಸ್ ಮತ್ತು 5 ಗೈಡ್ಸ್‌ಗಳು ಭಾಗವಹಿಸಿದ್ದರು. ಶಾಲೆಯ ಸ್ಕೌಟ್ ಶಿಕ್ಷಕರಾದ ಶ್ರೀ ಪುರುಷೋತ್ತಮ, ಶ್ರೀ ಪ್ರಶಾಂತ್ ಮತ್ತು ಗೈಡ್ ಶಿಕ್ಷಕಿ ಶ್ರೀಮತಿ ವನಿತಾ ಅವರು ಭಾಗವಹಿಸಿದ್ದರು. ತೊಕ್ಕೊಟು ಬಸ್ ನಿಲ್ದಾಣದಲ್ಲಿದ್ದ ಕಸ, ಕಡ್ಡಿ, ಪ್ಲಾಸ್ಟಿಕ್ ಅನ್ನು ಹೆಕ್ಕಿ ಸ್ವಚ್ಛಗೊಳಿಸಲಾಯಿತು.

ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಉಳ್ಳಾಲ ಇದರ ಅಧ್ಯಕ್ಷ ಶ್ರೀ ಎಂ.ಜಿ. ಕಜೆ ಮತ್ತು ಕಾರ್ಯದರ್ಶಿ ಶ್ರೀ ಅಬ್ದುಲ್ ಮಝೀದ್ ಮಲಾರ್ ಅವರು ಕಾರ್ಯಕ್ರಮವನ್ನು ಸಂಘಟಿಸಿದ್ದರು.

* "ಭೂಮಿಯ ಮೇಲಿರುವ ಪ್ರತಿಯೊಬ್ಬರಿಗೂ ಇರುವುದೊಂದೇ ಸೂರ್ಯ, ಉಸಿರಾಡುವ ಗಾಳಿ, ಕುಡಿಯುವ ನೀರು ಎಲ್ಲರಿಗೂ ಒಂದೇ ಆಗಿರುವಾಗ ಬೇಧ ಭಾವ ಯಾಕೆ?" ಎಂದು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರದ ಉಪನಿರ್ದೇಶಕ ಶ್ರೀ ಪ್ರಭಾಕರ ಶರ್ಮ ಅವರು ಹೇಳಿದರು. ನವೆಂಬರ್ 7 ರಂದು ಭಾರತ್ ಸ್ಕೌಟ್ಸ್-ಗೈಡ್ಸ್, ಜಿಲ್ಲಾ ಸಂಸ್ಥೆಯು, ಜಿಲ್ಲಾ ಸ್ಕೌಟ್-ಗೈಡ್ ಭವನದಲ್ಲಿ ಆಯೋಜಿಸಿದ ಧ್ವಜ ದಿನಾಚರಣೆಯ ಸಂದರ್ಭದಲ್ಲಿ ಧ್ವಜಚೀಟಿಯನ್ನು ಬಿಡುಗಡೆಗೊಳಿಸಿ ಮಾತನಾಡುತ್ತಿದ್ದರು.

ಪ್ರಾರಂಭದಲ್ಲಿ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷ ಶ್ರೀ ವಸಂತ ರಾವ್‌ರವರು ಎಲ್ಲರನ್ನು ಸ್ವಾಗತಿಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಯು. ಗೋಪಾಲಕೃಷ್ಣ ಭಟ್ ಅವರು ಧ್ವಜ ದಿನಾಚರಣೆಯ ಮಹತ್ವವನ್ನು ತಮ್ಮ ಪ್ರಾಸ್ತಾವಿಕ ಮಾತುಗಳಲ್ಲಿ ವಿವರಿಸಿದರು. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎನ್.ಜಿ. ಮೋಹನ್ ಅವರು ಸಭಾಧ್ಯಕ್ಷತೆ ವಹಿಸಿದ್ದು ಸಂಧರ್ಭೋಚಿತವಾಗಿ ಮಾತನಾಡಿದರು. ವೇದಿಕೆಯಲ್ಲಿ ಇತರ ಜಿಲ್ಲಾ ಪದಾಧಿಕಾರಿಗಳು ಹಾಜರಿದ್ದರು.



* ಭಾರತ್ ಸ್ಕೌಟ್ಸ್-ಗೈಡ್ಸ್ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆ ಹಾಗೂ ಅಮೃತ ವಿದ್ಯಾಲಯ ಮಂಗಳೂರು ಇದರ ಜಂಟಿ ಆಶ್ರಯದಲ್ಲಿ ಗಾಂಧಿ ಜಯಂತಿ ಆಚರಣೆಯು ನಡೆಯಿತು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶಾಲೆಯ ಆಡಳಿತಾಧಿಕಾರಿ ಶ್ರೀ ರಾಮಚಂದ್ರ ಭಟ್ ವಹಿಸಿದ್ದರು. ಮುಖ್ಯ ಅತಿಥಿಯಾಗಿ ಜಿಲ್ಲಾ ಮುಖ್ಯ ಆಯುಕ್ತ ಡಾ. ಎನ್.ಜಿ. ಮೋಹನ್, ಜಿಲ್ಲಾ ಸ್ಕೌಟ್ ಆಯುಕ್ತರು ಶ್ರೀ ರಾಮಶೇಷ ಶೆಟ್ಟಿ, ಜಿಲ್ಲಾ ಕೋಶಾಧಿಕಾರಿ ವಾಸದೇವ ಬೋಳೂರು ಉಪಸ್ಥಿತರಿದ್ದರು.

ಕಾರ್ಯಕ್ರಮದಲ್ಲಿ ಸರ್ವಧರ್ಮ ಪ್ರಾರ್ಥನೆ ಮಾಡಲಾಯಿತು. ಜಿಲ್ಲಾ ಮುಖ್ಯ ಆಯುಕ್ತರು ದೀಪ ಬೆಳಗಿಸಿ, ಗಾಂಧೀಜಿಯವರ ಭಾವಚಿತ್ರಕ್ಕೆ ಪುಷ್ಪಾರ್ಚನೆಯನ್ನು ಸಲ್ಲಿಸಿದರು. ಕಾರ್ಯಕ್ರಮದಲ್ಲಿ ಅಮೃತ ವಿದ್ಯಾಲಯದ ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್‌ಗಳು ಸ್ಕೌಟ್ಸ್ ಮಾಸ್ಟರ್ ಶ್ರೀ ವಾಮನ್ ದಾಸ್, ಗೈಡ್ಸ್ ಕ್ಯಾಪ್ಟನ್ ಶ್ರೀಮತಿ ಶರ್ಮಿಳಾ, ಲೇಡಿ ಕಬ್ ಮಾಸ್ಟರ್ ಶ್ರೀಮತಿ ಲತಾರವರು ಭಾಗವಹಿಸಿದ್ದರು. ಸ್ಕೌಟ್ಸ್-ಗೈಡ್ಸ್‌ಗಳು ಶಾಲೆಯ ಪರಿಸರವನ್ನು ಸ್ವಚ್ಛಗೊಳಿಸಿದರು.



* ಅಕ್ಟೋಬರ್ 2 ರಂದು ವಿದ್ಯಾಬೋಧಿನೀ ಹಿರಿಯ ಪ್ರಾಥಮಿಕ ಶಾಲೆ, ಬಾಳಿಲ ಇಲ್ಲಿನ ಸ್ಕೌಟ್ಸ್-ಗೈಡ್ಸ್‌ಗಳು ಗ್ರಾಮ ಪಂಚಾಯತ್ ಬಾಳಿಲ ಇದರ ಸಹಯೋಗದಲ್ಲಿ ಬಾಳಿಲ ಪರಿಸರದಲ್ಲಿ ಸ್ವಚ್ಛತಾ ಅಭಿಯಾನ ಕೈಗೊಂಡರು. ಈ ಸಂದರ್ಭದಲ್ಲಿ



ಗ್ರಾಮ ಪಂಚಾಯತ್ ಅಭಿವೃದ್ಧಿ ಅಧಿಕಾರಿ ಶ್ರೀಮತಿ ಚಂದ್ರಾವತಿ, ಗ್ರಾಮ ಪಂಚಾಯತ್ ಅಧ್ಯಕ್ಷರು ಶ್ರೀ ಕೃಷ್ಣಪ್ಪ ಪೂಜಾರಿ, ತಾಲೂಕ ಪಂಚಾಯತ್ ಸದಸ್ಯರು ಶ್ರೀಮತಿ ಜಾಹ್ನವಿ ಕಾಂಚೋಡು, ಪಂಜ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಉದಯಕುಮಾರ್ ರೈ, ಶಾಲಾ ಮುಖ್ಯ ಗುರುಗಳು, ಅಧ್ಯಾಪಕ ವೃಂದ ಹಾಗೂ ಊರವರು ಹಾಜರಿದ್ದರು.

* ಬುರೂಜ್ ಆಂಗ್ಲ ಮಾಧ್ಯಮ ಪ್ರೌಢಶಾಲೆ, ರಝಾನಗರ ಇಲ್ಲಿ ಗಾಂಧಿ ಜಯಂತಿಯನ್ನು ಆಚರಿಸಲಾಯಿತು. ಶಾಲಾ ಮಕ್ಕಳಿಂದ ಸರ್ವಧರ್ಮ ಪ್ರಾರ್ಥನೆ ಕಾರ್ಯಕ್ರಮ ನಡೆಯಿತು. ಮಹಾತ್ಮ ಗಾಂಧೀಜಿಯ ಕುರಿತಾದ ಹಾಡುಗಳು. ಚಿತ್ರಕಲೆ, ಕವಾಯತುಗಳು ಪ್ರದರ್ಶಿಸಲ್ಪಟ್ಟವು, ರಸ್ತೆಯನ್ನು ಹಾಗೂ ಶಾಲಾ ಪರಿಸರವನ್ನು ಸ್ವಚ್ಛ ಮಾಡಲಾಯಿತು. ಶಾಲಾ ಸಂಚಾಲಕರಾದ ಶ್ರೀ ಶೇಕ್ ರಹ್ಮತ್ತುಲ್ಲಾ, ಶಾಲಾ ಮುಖ್ಯ ಶಿಕ್ಷಕ ಜಾರ್ಜ್ ಕೆ.ಎಫ್. ಹಾಗೂ ಶಿಕ್ಷಕಿ ಶ್ರೀಮತಿ ಮಹಾಲಕ್ಷ್ಮಿ ಗಾಂಧೀಜಿಯ ಜೀವನ ಚರಿತ್ರೆ ಮತ್ತು ಅವರು ನಡೆದು ಬಂದ ದಾರಿಯ ಕುರಿತು ಸ್ಕೌಟ್ಸ್-ಗೈಡ್ಸ್‌ಗಳಿಗೆ ತಿಳಿಸಿದರು.

* ಸರೋಜಿನಿ ಮಧುಸೂದನ ಕುಶೆ ಶಿಕ್ಷಣ ಸಂಸ್ಥೆಯಲ್ಲಿ ಅಕ್ಟೋಬರ್ 2 ರಂದು ಗಾಂಧೀ ಜಯಂತಿ ಮತ್ತು ಲಾಲ್‌ಬಹದ್ದೂರ್ ಶಾಸ್ತ್ರಿ ಜಯಂತಿಯನ್ನು ಆಚರಿಸಲಾಯಿತು. ಈ ಪ್ರಯುಕ್ತ ಸ್ಕೌಟ್ಸ್-ಗೈಡ್ಸ್ ಸರ್ವಧರ್ಮ ಪ್ರಾರ್ಥನೆಯಲ್ಲಿ ಪಾಲ್ಗೊಂಡರು. ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಪ್ರತೀಮ್ ಕುಮಾರ್ ಇವರು ಉಪಸ್ಥಿತರಿದ್ದರು.

* ಎಮ್.ಜಿ.ಸಿ. ಪ್ರೌಢಶಾಲೆಯಲ್ಲಿ ಅಕ್ಟೋಬರ್ 2ರಂದು ಗಾಂಧಿಜಯಂತಿಯನ್ನು ಆಚರಿಸಲಾಯಿತು. ಸರ್ವಧರ್ಮ ಪ್ರಾರ್ಥನೆಯನ್ನು ಮಾಡಲಾಯಿತು. ಶಾಲಾ ಮುಖ್ಯೋಪಾಧ್ಯಾಯಿನಿ ಶ್ರೀಮತಿ ಪೂರ್ಣಿಮಾ ಜೆ.ಬಿ. ಭಟ್, ಸ್ಕೌಟ್ ಮಾಸ್ಟರ್ ಶ್ರೀ ವೀರೇಶ್ ಉಪಸ್ಥಿತರಿದ್ದರು. ಗೈಡ್ ಕ್ಯಾಪ್ಟನ್ ಸೌಮ್ಯ, ಫ್ಲಾಕ್ ಲೀಡರ್ ಕಾತ್ಯಾಯಿನಿ, ಲೇಡಿ ಕಬ್ ಮಾಸ್ಟರ್ ಶ್ರೀಮತಿ ವನಜ ಇವರು ಉಪಸ್ಥಿತರಿದ್ದರು. ಕುಮಾರಿ ಕಾವ್ಯ(ಗೈ) ಸ್ವಾಗತಿಸಿದರು. ಶ್ರೀ ಪರೀಕ್ಷಿತ್ ವಂದಿಸಿದರು.

* ಮಂಗಳೂರು ಸ್ಥಳೀಯ ಸಂಸ್ಥೆ ಲೂರ್ಡ್ಸ್ ಸೆಂಟ್ರಲ್ ಶಾಲೆ ಸ್ಕೌಟ್ಸ್-ಗೈಡ್ಸ್ ವತಿಯಿಂದ ನಡೆದ ನಿರಂತರ ಸ್ವಚ್ಛತಾ ಆಂದೋಲನವನ್ನು ಫಾದರ್ ರೋಬರ್ಟ್ ಡಿ'ಸೋಜ ಉದ್ಘಾಟಿಸಿದರು.



* ಅಕ್ಟೋಬರ್ 7 ರಿಂದ 8 ರ ವರೆಗೆ ಜಿಲ್ಲಾ ತರಬೇತಿ ಕೇಂದ್ರ ಪಿಲಿಕುಳದಲ್ಲಿ 2017-18 ನೇ ಸಾಲಿನ ರಾಷ್ಟ್ರಪತಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ಜಿಲ್ಲಾ ಮಟ್ಟದ ಪರೀಕ್ಷಾ ಪೂರ್ವಸಿದ್ಧತಾ ಶಿಬಿರ ನಡೆಯಿತು. ಶಿಬಿರದಲ್ಲಿ ಸ್ಕೌಟ್ಸ್ ವಿಭಾಗದಲ್ಲಿ 64 ವಿದ್ಯಾರ್ಥಿಗಳು, ಗೈಡ್ಸ್ ವಿಭಾಗದಲ್ಲಿ 76 ವಿದ್ಯಾರ್ಥಿನಿಯರು ಭಾಗವಹಿಸಿದರು. ರಾಷ್ಟ್ರಪತಿ ಪರೀಕ್ಷಾ ಪೂರ್ವಸಿದ್ಧತಾ ಶಿಬಿರದ ನಾಯಕತ್ವವನ್ನು ಶ್ರೀಮತಿ ಜಯಶ್ರೀ ಎಲ್.ಟಿ. (ಗೈ) ರವರು ವಹಿಸಿದ್ದರು.

* ಅಕ್ಟೋಬರ್ 21 ರಿಂದ 22ರ ವರೆಗೆ ದಕ್ಷಿಣ ಕನ್ನಡ ಜಿಲ್ಲಾ ಮಟ್ಟದ ತರಬೇತಿ ಸಲಹೆಗಾರರ ತರಬೇತಿ ಶಿಬಿರವನ್ನು ಜಿಲ್ಲಾ ತರಬೇತಿ ಕೇಂದ್ರ ಪಿಲಿಕುಳ ಇಲ್ಲಿ ಹಮ್ಮಿಕೊಳ್ಳಲಾಯಿತು. ಜಿಲ್ಲಾ ತರಬೇತಿ ಆಯುಕ್ತ ಶ್ರೀ ಪ್ರತೀಮ್ ಕುಮಾರ್ ನಾಯಕತ್ವ ವಹಿಸಿದ್ದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಗೋಪಾಲಕೃಷ್ಣ ಭಟ್ ಹಾಗೂ ಜಿಲ್ಲಾ ತರಬೇತಿ ಆಯುಕ್ತೆ ಶ್ರೀಮತಿ ಜಯಶ್ರೀಯವರು ಸಹಕರಿಸಿದರು.

ಇದೇ ಸಂದರ್ಭದಲ್ಲಿ ಶ್ರೀ ರೋಹಿತ್ ರಾವ್ ರವರ ನಾಯಕತ್ವದಲ್ಲಿ ಮಂಗಳೂರು ನಗರ ಸ್ಥಳೀಯ ಸಂಸ್ಥೆಯ ಸಹಕಾರದಿಂದ ಅಮೆಚೂರ್ ರೇಡಿಯೋ ಕ್ಲಬ್ ನವರ ಸಹಕಾರದಿಂದ ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ವಸಂತ್ ರಾವ್ ರವರ ಅಧ್ಯಕ್ಷತೆಯಲ್ಲಿ ಜೋಟಾ ಕಾರ್ಯಕ್ರಮ ನಡೆಯಿತು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀಮತಿ ಲತಿಕಾ ರವರಿಗೆ ಅನಿಲ್, ದಿನೇಶ್, ಶುಭವಿಶ್ವನಾಥ್ ಸಹಕರಿಸಿದರು. ಮಂಗಳೂರು ನಗರ ಮತ್ತು ಜಿಲ್ಲೆಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಸಕ್ರಿಯವಾಗಿ ಭಾಗವಹಿಸಿದ್ದರು.

* ಅಕ್ಟೋಬರ್ 26 ರದು ಸುಳ್ಯ ಸಂಧ್ಯಾರಶ್ಮಿ ಸಭಾಂಗಣದಲ್ಲಿ ದ್ವಿತೀಯ ಸೋಪಾನ್, ದ್ವಿತೀಯ ಚರಣ್ ಪರೀಕ್ಷಾ ಶಿಬಿರ ನಡೆಯಿತು. ಮಾನ್ಯ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಕೆಂಪಲಿಂಗಪ್ಪನವರು ಶುಭ ಹಾರೈಸಿ ಪರೀಕ್ಷೆಯನ್ನು ಚೆನ್ನಾಗಿ ಬರೆಯುವಂತೆ ಸೂಚಿಸಿದರು. ಶ್ರೀ ಲಕ್ಷ್ಮೀಶ ರೈ ದೈಹಿಕ ಶಿಕ್ಷಣ ಪರಿವೀಕ್ಷಕರು, ಶ್ರೀ ಪದ್ಮನಾಭ ಸಿ.ಆರ್.ಪಿ. ಶ್ರೀ ಹಾಜಿ ಅಬೂಬಕ್ಕರ್, ಶ್ರೀ ಮಾಧವ ಗೌಡ ಎಂ. ಶ್ರೀ ಜಾರ್ಜ್ ಡಿ'ಸೋಜ ರವರು ಉಪಸ್ಥಿತರಿದ್ದರು.

ಸ್ಕೌಟ್-ಗೈಡ್ಸ್‌ಗಳಿಗೆ ಶ್ರೀಮತಿ ಪ್ರೇಮಲತಾರವರ ಮೇಲ್ವಿಚಾರಣೆಯಲ್ಲಿ ಮತ್ತು ಬುಲ್‌ಬುಲ್‌ಗಳಿಗೆ ಸಿಸ್ಟರ್ ಜಾನೆಟ್ ಲೋಬೋ ಇವರ ಮೇಲ್ವಿಚಾರಣೆಯಲ್ಲಿ ಪರೀಕ್ಷೆ ಜರುಗಿತು. ಪರೀಕ್ಷೆಗೆ ವಿವಿಧ ಶಾಲೆಗಳಿಂದ 32 ಸ್ಕೌಟ್ಸ್, 73 ಗೈಡ್ಸ್, 19 ಬುಲ್‌ಬುಲ್ಸ್ ಹಾಜರಿದ್ದರು.

* ಎಸ್.ಡಿ.ಎಮ್. ಆಂಗ್ಲ ಮಾಧ್ಯಮ ಶಾಲೆ ಬೆಳ್ತಂಗಡಿಯಲ್ಲಿ ನವೆಂಬರ್ 7 ರಂದು ಸ್ಕೌಟ್ಸ್-ಗೈಡ್ಸ್ ಧ್ವಜ ದಿನಾಚರಣೆಯನ್ನು ಬೆಲ್ಜಿಯಂ ಪ್ರಜೆ ಕು. ಜೋಲಿನರೊಂದಿಗೆ ಆಚರಿಸಲಾಯಿತು. ಈ ಸಂದರ್ಭದಲ್ಲಿ ಬೆಳ್ತಂಗಡಿ ಸ್ಥಳೀಯ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ವಿಠಲ್ ಶೆಟ್ಟಿ, ತರಬೇತುದಾರರಾದ ಶ್ರೀ ವಾಲ್ಟರ್ ಜೆ ಪಿಂಟೋ ಹಾಗೂ ಶ್ರೀಮತಿ ಪ್ರಫುಲ್ಲಾ ಜಿಲ್ಲಾ ತರಬೇತುದಾರರು. ಎಸ್.ಡಿ.ಎಂ. ಬೆಳ್ತಂಗಡಿಯ ಮುಖ್ಯೋಪಾಧ್ಯಾಯಿನಿ ಶ್ರೀಮತಿ ಹೇಮಲತಾ ಎಂ.ಆರ್. ಎಸ್.ಡಿ.ಎಂ. ಫ್ಲಾಕ್ ಲೀಡರ್, ಬೆಳ್ತಂಗಡಿ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀಮತಿ ಪ್ರಮೀಳಾರು ಉಪಸ್ಥಿತರಿದ್ದರು.

## ದಾವಣಗೆರೆ



ನವೆಂಬರ್ 5 ರಂದು ಸಮುದಾಯ ಅಭಿವೃದ್ಧಿ ಕಾರ್ಯಕ್ರಮವನ್ನು ಶ್ರೀ ತರಳಬಾಳು ಜಗದ್ಗುರು ವಸತಿ ಶಾಲೆ, ಅನುಭವ ಮಂಟಪ ಇಲ್ಲಿ ಬಾಪೂಜಿ ಓಪನ್ ಸ್ಕೌಟ್ ಟ್ರೂಪ್ ಮತ್ತು ಮದರ್ ತೆರೆಸಾ ಓಪನ್ ಗೈಡ್ ಕಂಪನಿ ವತಿಯಿಂದ ಆಯೋಜಿಸಲಾಗಿತ್ತು. ಸುಮಾರು 75 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಶಾಲೆಯ ಆವರಣವನ್ನು ಸ್ವಚ್ಛಗೊಳಿಸಿ ಮರಗಳಿಗೆ ಕ್ಯಾಲ್ಸಿಯಂ ಲೇಪಿಸಿದರು. ಈ ಸಂದರ್ಭದಲ್ಲಿ ಶ್ರೀ ತರಳಬಾಳು ಜಗದ್ಗುರು ಸೆಂಟ್ರಲ್ ಶಾಲೆಯ ಪ್ರಾಂಶುಪಾಲರಾದ ಶ್ರೀ ಕೆ. ಸೋಮಶೇಖರ್, ಸ್ಕೌಟ್ ಮಾಸ್ಟರ್‌ಗಳು ಮತ್ತು ಗೈಡ್ ಕ್ಯಾಪ್ಟನ್‌ಗಳು ಉಪಸ್ಥಿತರಿದ್ದರು.

* ಅನ್‌ಮೋಲ್ ಶಾಲೆಯ ಸ್ಕೌಟ್-ಗೈಡ್ ಬಾಪೂಜಿ ಓಪನ್ ಸ್ಕೌಟ್ಸ್ ಮತ್ತು ಮದರೆ ಥೆರೇಸಾ ಓಪನ್ ಗೈಡ್ಸ್ ಕಂಪನಿ ಮಕ್ಕಳು ಹಾಗೂ ಶಾಲಾ ಮಕ್ಕಳು ಸೇರಿ ಸರ್ದಾರ್ ವಲ್ಲಬಾಯ್ ಪಟೇಲ್ ಜನ್ಮ ದಿನಾಚರಣೆಯನ್ನು ಆಚರಿಸಿದರು. ಈ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಶಾಲೆಯ ಪ್ರಾಂಶುಪಾಲರಾದ ಶ್ರೀ ಕೊಟ್ರೇಶ್, ಯು ಸಹ ಶಿಕ್ಷಕರಾದ ಶ್ರೀ ವೆಂಕಟೇಶ್‌ಮೂರ್ತಿ ಹಾಗೂ ಶ್ರೀಮತಿ ಆಶಾರಾಣಿಯವರು ಸ್ಕೌಟ್ಸ್-ಗೈಡ್ಸ್ ಮಕ್ಕಳಿಗೆ ಅವರ ಇತಿಹಾಸ, ಸಾಧನೆ ಧ್ಯೇಯ, ಧೋರಣೆ, ಇತ್ಯಾದಿ ವಿವರಗಳನ್ನು ನೀಡಿ ಪ್ರತಿಜ್ಞೆಯನ್ನು ಮಾಡಿಸಿದರು.

## ದೀಕ್ಷೆ

ದೀಕ್ಷೆಯ ತೊಡು ಇಂದೆ
ಕಂಕಣ ಕಟ್ಟಿಂದೆ..........
ಸ್ಕೌಟ್ ಇದೆಯೊಂದೆ, ಗೈಡ್ ಇದೆಯೊಂದೆ ॥ಪ॥

ಬೇಡನ್ ಪೊವೆಲ್ ಸ್ಥಾಪಿಸಿದ
ವಿಶ್ವವ್ಯಾಪ್ತಿಯ ಹಬ್ಬಿಸಿದ
ಹಸ್ತ ಲಾಘವ ಚಾಚಿಸಿದ
ಮೂರು ಅಂಶದ ಘೋಷಿಸಿದ ॥1॥

ಶಿಸ್ತಿನ ಸಿಪಾಯಿಯಾಗಿರಲು
ಪತ್ನಿಯು ಕೂಡಾ ಸೇರಿರಲು
ಸ್ಕೌಟಿನ ನಿಯಮ ಸಾರಿರಲು
ವಿಶ್ವ ಸೋದರತೆ ಬೆಳೆಸಿರಲು ॥2॥

ಹಾರಲಿ ಸ್ಕೌಟ್-ಗೈಡ್ ಬಾವುಟವು
ಹರಡಲಿ ಸ್ಕೌಟ್-ಗೈಡ್ ಈ ದಳವು
ಕಲಿಯಿರಿ ಸ್ಕೌಟಿನ ಧ್ಯೇಯಗಳು
ಮಾಡಿರಿ ಒಂದೇ ಪ್ರತಿಜ್ಞೆಯ ॥3॥

ಹೊಸೂರು ಕೆ. ರಾಜಕುಮಾರ್
ಭಾಷಾ ಶಿಕ್ಷಕರು ಮತ್ತು ಸ್ಕೌಟ್ ಮಾಸ್ಟರ್
ಸರ್ಕಾರಿ ಪ್ರೌಢಶಾಲೆ, ಮಂಡಘಟ್ಟ, ಶಿವಮೊಗ್ಗ ಜಿಲ್ಲೆ

## ಧಾರವಾಡ

ಸೆಪ್ಟಂಬರ್ 12 ರಂದು ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ, ಹುಬ್ಬಳ್ಳಿ ವತಿಯಿಂದ ಹೆಬಸೂರ ಸೆಕೆಂಡರಿ ಶಾಲೆ, ಸರಕಾರಿ ಹಿರಿಯ ಪ್ರಾಥಮಿಕ ಕನ್ನಡ ಗಂಡು ಮಕ್ಕಳ ಶಾಲೆ, ಸರಕಾರಿ ಹಿರಿಯ ಪ್ರಾಥಮಿಕ ಕನ್ನಡ ಹೆಣ್ಣು ಮಕ್ಕಳ ಶಾಲೆ, ಹೆಬಸೂರ, ಹಾಗೂ ಸರಕಾರಿ ಹಿರಿಯ ಪ್ರಾಥಮಿಕ ಶಾಲೆ, ಕಿರೆಸೂರ ಇವರ ಸಂಯುಕ್ತ ಆಶ್ರಯದಲ್ಲಿ ಕಿರಣ ಬೇಡಿ, ಮದರ್ ಥೆರೆಸಾ ಗೈಡ್ ಕಂಪನಿಗಳ ಉದ್ಘಾಟನಾ ಕಾರ್ಯಕ್ರಮ ಜರುಗಿತು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಅಧ್ಯಕ್ಷರಾದ ಶ್ರೀ ವಾಯ್ ಎಚ್. ಬಣವಿಯವರು ವಹಿಸಿಕೊಂಡಿದ್ದರು. ಸದರಿ ಕಾರ್ಯಕ್ರಮದ ಉದ್ಘಾಟಕರಾಗಿ ಜಿಲ್ಲಾ ಶಿಕ್ಷಣಾಧಿಕಾರಿಗಳಾದ ಶ್ರೀ ಎಂ.ಎಲ್. ಹಂಚಾಟೆ ಆಗಮಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಎಂ.ಎಂ. ಲೋಂಡೆ, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀಮತಿ ಪ್ರಭಾ ಎಂ. ಲೋಂಡೆ, ಜಿಲ್ಲಾ ಕಾರ್ಯದರ್ಶಿಗಳು, ಶ್ರೀಮತಿ ಬಿರಾದರ, ಉಪತಹಸಿಲ್ದಾರ್, ಶ್ರೀ ಸುರೇಶ್ ಬಣವಿ, ಉಪಾಧ್ಯಕ್ಷರು ಹೆಬಸೂರ ಸೆಕೆಂಡರಿ ಶಾಲೆ, ಹೆಬಸೂರ, ಶ್ರೀ ವಾಯ್. ಎಫ್. ಚುಳಕಿ, ತಾಲೂಕ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಅಧ್ಯಕ್ಷರು, ಶ್ರೀ ಮಂಜುನಾಥ ಹೊಸಮನಿ, ಎಸ್.ಡಿ.ಎಂ.ಸಿ. ಅಧ್ಯಕ್ಷರು ಸರಕಾರಿ ಹಿರಿಯ ಪ್ರಾಥಮಿಕ ಕನ್ನಡ ಗಂಡು ಮಕ್ಕಳ ಶಾಲೆ ಹೆಬಸೂರ, ಶ್ರೀ ಸುರೇಶ ಕುರ್ತಕೋಟಿ, ಎಸ್.ಡಿ.ಎಂ.ಸಿ. ಅಧ್ಯಕ್ಷರು, ಸರಕಾರಿ ಹಿರಿಯ ಪ್ರಾಥಮಿಕ ಕನ್ನಡ ಹೆಣ್ಣು ಮಕ್ಕಳ ಶಾಲೆ ಹೆಬಸೂರ ಶ್ರೀಮತಿ ಗುಡರಡ್ಡಿ ಮುಖ್ಯೋಪಾಧ್ಯಾಯರು ಹೆಬಸೂರು ಸೆಕೆಂಡರಿ ಶಾಲೆ ಹೆಬಸೂರ, ಶ್ರೀ ಸಿ. ವಾಯ್. ಬೆಟಗೇರಿ ಮುಖ್ಯೋಪಾಧ್ಯಾಯರು ಸರಕಾರಿ ಹಿರಿಯ ಪ್ರಾಥಮಿಕ ಕನ್ನಡ ಹೆಣ್ಣುಮಕ್ಕಳ ಶಾಲೆ ಹೆಬಸೂರು, ಶ್ರೀ ವಾಯ್. ಸಿ ಉಮಚಗಿ ಮುಖ್ಯೋಪಾಧ್ಯಾಯರು ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಕಿರೆಸೂರ ಹಾಗೂ ಇತರರು ಭಾಗವಹಿಸಿದ್ದರು.

* ಅಕ್ಟೋಬರ್ 2 ರಂದು ಸರಕಾರಿ ಮಾದರಿ ಪ್ರಾಥಮಿಕಶಾಲೆ (ಬಿ.ಆರ್.ಸಿ.) ಉಣಕಲ್‌ದಲ್ಲಿ ಗಾಂಧೀ ಜಯಂತಿ ಹಾಗೂ ಲಾಲ್ ಬಹದ್ದೂರ್ ಶಾಸ್ತ್ರೀಜಿಯವರ ಜನ್ಮ ದಿನಾಚರಣೆ ಅಂಗವಾಗಿ ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ಶಿಕ್ಷಕರಿಂದ ನಡೆದ ಸರ್ವಧರ್ಮ ಪ್ರಾರ್ಥನೆ ಮತ್ತು ಸ್ವಚ್ಛ ಭಾರತದ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಮಾನ್ಯ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀಮತಿ ಎನ್. ಪ್ರಾರ್ಥನೆ ಮತ್ತು ಸ್ವಚ್ಛ ಭಾರತದ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಮಾನ್ಯ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀಮತಿ ಎನ್.ಕೆ. ಸಾಹುಕಾರ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಎಂ.ಎಸ್. ಪಾಟೀಲ, ಶ್ರೀಮತಿ ಸುರಳೇಶ್ವರ ಪ್ರ. ಗು. ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಉಣಕಲ್, ಶ್ರೀ ಎನ್.ಎಸ್. ಬಾದಾಮಿ ತಾಲೂಕ ಸಂಸ್ಥೆಯ ಕಾರ್ಯದರ್ಶಿಗಳು, ಶ್ರೀಮತಿ ಎಸ್.ಎ. ಮನಿಯಾರ ತಾಲೂಕ ಸಂಸ್ಥೆಯ ಸಹಕಾರ್ಯದರ್ಶಿಗಳು ಹಾಗೂ ಶ್ರೀಮತಿ ಎಂ.ಸಿ. ಉಪ್ಪಿನ ಶ್ರೀಮತಿ ಆರ್.ವಿ. ಭೋಸಲೆ, ಶ್ರೀಮತಿ ಗೌರಮ್ಮ ಬಿ.ಆರ್.ಸಿ. ಸಮನ್ವಯ ಅಧಿಕಾರಿಗಳು ಭಾಗವಹಿಸಿದ್ದರು. ಕ್ಷೇತ್ರ ಶಿಕ್ಷಣಾಧಿಕಾರಿಗಳು ಮಾತನಾಡಿ, ಗಾಂಧೀಜಿ ಹಾಗೂ ಲಾಲ್ ಬಹದ್ದೂರ್ ಶಾಸ್ತ್ರೀಜೀಯವರ ಆದರ್ಶಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬೇಕು ಮತ್ತು ಅವರ ಜೀವನದ ತತ್ವಗಳನ್ನು ಪಾಲಿಸಬೇಕೆಂದು ಹೇಳಿದರು.

* ಅಕ್ಟೋಬರ್ 4 ರಂದು ಭಾರತ್ ಸ್ಕೌಟ್-ಗೈಡ್ಸ್, ಸ್ಥಳೀಯ ಸಂಸ್ಥೆ ನವಲಗುಂದ ವತಿಯಿಂದ ಸರಕಾರಿ ಹಿರಿಯ ಉರ್ದು ಪ್ರಾಥಮಿಕ ಶಾಲೆ, ನಾಗನೂರದಲ್ಲಿ ಸ್ಕೌಟರ್-ಗೈಡರ್‌ಗಳ ಪುನಶ್ಚೇತನ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಅಶೋಕ ಭಜಂತ್ರಿಯವರು ವಹಿಸಿಕೊಂಡಿದ್ದರು. ಕಾರ್ಯಕ್ರಮದ ಉದ್ಘಾಟನೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎಂ. ಲೋಂಡೆ ನೆರವೇರಿಸಿದರು. ಅತಿಥಿಗಳಾಗಿ ತಾಲೂಕಿನ ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ಬಿ.ಜಿ. ತೊಗರಿ, ಶಿಕ್ಷಣ ಪ್ರೇಮಿ ಶ್ರೀ ಲಂಬೂನವರ, ಎಸ್.ಡಿ.ಎಂ.ಸಿ. ಅಧ್ಯಕ್ಷರಾದ ಶ್ರೀ ದರಗಿರಸಾಬ ಕಮಲಶಾನವರ ಭಾಗವಹಿಸಿದ್ದರು.

ಶ್ರೀ ಸಿ.ಎಂ. ಕೆಂಗಾರ ಎ.ಎಲ್.ಟಿ.(ಎಸ್) ಶ್ರೀ ಎಸ್.ಎಸ್. ಪಾಟೀಲ, ಎ.ಎಲ್.ಟಿ.(ಎಸ್) ಶ್ರೀ ಎಸ್.ಬಿ. ಶಿವಸಿಂಪಿ, ಎಚ್.ಡಬ್ಲ್ಯೂ.ಬಿ.(ಎಸ್) ಸಂಪನ್ಮೂಲ ವ್ಯಕ್ತಿಗಳಾಗಿ ಭಾಗವಹಿಸಿದ್ದರು. ಸದರಿ ಕಾರ್ಯಕ್ರಮದಲ್ಲಿ 35 ಸ್ಕೌಟರ್‌ಗಳು 25 ಗೈಡರ್‌ಗಳು ಭಾಗವಹಿಸಿದ್ದರು.

## ಗದಗ



ಅಕ್ಟೋಬರ್ 14 ರಂದು ರೋವರ್-ರೇಂಜರ್ ರ್‍ಯಾಲಿಯನ್ನು ನಡೆಸಲಾಯಿತು. ಇದಕ್ಕೆ ಚಾಲನೆಯನ್ನು ಶ್ರೀಮತಿ ಸುಮಾಗರಗ, ಡಿ.ಸಿ.(ಗೈ) ನೀಡಿದರು. ಶ್ರೀ ಸುರೇಶ ಗರಗ, ಶ್ರೀ ಮಡಿವಾಳರ ಸ್ಥಾನಿಕ ಆಯುಕ್ತರು, ಶ್ರೀ ಟಿ.ಆರ್. ಹಡಗಲಿ, ಉಪಾಧ್ಯಕ್ಷರು, ಶ್ರೀ ಜಿ.ಎಚ್. ಪೂಜಾರ, ಜಿಲ್ಲಾ ಕಾರ್ಯದರ್ಶಿ ಶ್ರೀ ಜಿ.ಎಸ್. ಗೌಡರ ಖಜಾಂಚಿ ಶ್ರೀಮತಿ ಶೋಭಾಗೌಡರ, ಜಿಲ್ಲಾ ಜಂಟಿ ಕಾರ್ಯದರ್ಶಿ, ಶ್ರೀ ಎಂ.ಎಸ್. ಪಾಟೀಲ, ಸಹಕಾರ್ಯದರ್ಶಿ ಶ್ರೀಮತಿ ಬಿ.ಡಿ. ಪವಾರ್ ಡಿ.ಟಿ.(ಗೈ) ಶ್ರೀ ಶಾಂತಕುಮಾರ್ ಮಲ್ಲಾಪುರ ಹಾಗೂ ಜಿಲ್ಲೆಯ ರೋವರ್ ಸ್ಕೌಟ್ ಲೀಡರ್, ರೇಂಜರ್ಸ್‌ಗಳು ಭಾಗವಹಿಸಿದ್ದರು.



* ಅಕ್ಟೋಬರ್ 12 ರಿಂದ 14 ರ ವರೆಗೆ ಜಿಲ್ಲಾ ಮಟ್ಟದ ರೋವರ್ಸ್-ರೇಂಜರ್ಸ್ ನಿಪುಣ್ ಪರೀಕ್ಷಾ ನಡೆಸಲಾಯಿತು. ಶಿಬಿರವನ್ನು ಕೆ.ಹೆಚ್. ಪಾಟೀಲ ಸಭಾಭವನದಲ್ಲಿ ನಡೆಸಲಾಯಿತು. ಶ್ರೀಮತಿ ಸುಮಾಗರಗ, ಡಿ.ಸಿ.(ಗೈ) ಅಧ್ಯಕ್ಷತೆ ವಹಿಸಿ ಮಾತನಾಡುತ್ತಾ ಈ ಶಿಬಿರದಿಂದ ರೋವರ್-ರೇಂಜರ್ ರವರುಗಳಲ್ಲಿ ಪರಸ್ಪರ ವಿಚಾರ ವಿನಿಮಯ ಹಾಗು ಬುದ್ದಮತ್ತೇ ಹೆಚ್ಚುತ್ತದೆ ಎಂದು ತಿಳಿಸಿದರು.

ರೋವರ್ ವಿಭಾಗಕ್ಕೆ ಶ್ರೀ ಶಾಂತಕುಮಾರ್ ಮಲ್ಲಾಪುರ ಹಾಗೂ ರೇಂಜರ್ ವಿಭಾಗಕ್ಕೆ ಶ್ರೀಮತಿ ಬಿ.ಡಿ. ಪವಾರ್ ನಾಯಕರಾಗಿದ್ದರು. ಶ್ರೀ ಸುರೇಶ ಗರಗ, ಉಪಾಧ್ಯಕ್ಷರು, ಶ್ರೀ ಟಿ.ಆರ್. ಹಡಗಲಿ, ಉಪಾಧ್ಯಕ್ಷರು, ಶ್ರೀ ಮಡಿವಾಳರ ಸ್ಥಾನಿಕ ಆಯುಕ್ತರು, ಶ್ರೀ ಜಿ.ಹೆಚ್. ಗೌಡರ, ಖಜಾಂಚಿ, ಶ್ರೀಮತಿ ಶೋಭಾ ಗೌಡರ, ಜಂಟಿ ಕಾರ್ಯದರ್ಶಿ ಹಾಗೂ ಜಿಲ್ಲೆಯ ರೋವರ್ ಸ್ಕೌಟ್-ಲೀಡರ್ಸ್, ರೇಂಜರ್‌ಲೀಡರ್ಸ್ ರವರಗುಳು ಹಾಗು 180 ರೋವರ್-ರೇಂಜರ್‌ಗಳು ಭಾಗವಹಿಸಿದ್ದರು.



* ನವೆಂಬರ್ 01ರಂದು ಗದಗ ಜಿಲ್ಲಾ ಕ್ರೀಡಾಂಗಣದಲ್ಲಿ ಕನ್ನಡ ರಾಜ್ಯೋತ್ಸವ ಪ್ರಯುಕ್ತ ಜರುಗಿದ ಪಥಸಂಚಲನದಲ್ಲಿ ಭಾಗವಹಿಸಿ ಪ್ರಥಮ ಬಹುಮಾನ ಗಳಿಸಿದ ಸ್ಕೌಟ್ಸ್‌ಗಳಿಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್‌ರಾಜ್ ಸಚಿವರಾದ ಶ್ರೀ ಹೆಚ್.ಕೆ. ಪಾಟೀಲ್ ಬಹುಮಾನ ನೀಡಿದರು.

## ಹಾವೇರಿ



ಅಕ್ಟೋಬರ್ 31ರಂದು ಸದ್ಭಾವನಾ ದಿನಾಚರಣೆ ನಿಮಿತ್ತ ಸ್ವಚ್ಛ ಭಾರತ್ ಅಭಿಯಾನ ಕಾರ್ಯವನ್ನು ಹಿರೇಕೆರೂರ ತಾಲೂಕ, ಮಾಸೂರಿನಲ್ಲಿ ತಾಲೂಕಿನ ಸ್ಕೌಟ್ಸ್-ಗೈಡ್ಸ್‌ಗಳು ಮಾಸೂರ ಬಸ್ ನಿಲ್ದಾಣ, ಸರಕಾರಿ ಆಸ್ಪತ್ರೆ ಮತ್ತು ಸರ್ವಜ್ಞ ಸರ್ಕಲ್‌ಗಳನ್ನು ಸ್ವಚ್ಛತಾ ಕಾರ್ಯ ಮಾಡಿದರು. ಕಾರ್ಯಕ್ರಮದಲ್ಲಿ ಶ್ರೀ ಎವ್.ಎಚ್. ಕಡೇಮನಿ, ತಾಲೂಕ ಕಾರ್ಯದರ್ಶಿ ಶ್ರೀ ಎಸ್.ಎಚ್. ಮಡಿವಾಳರ ಶ್ರೀ ಎಸ್.ಎಸ್. ಖತೀಬ, ಶ್ರೀ ಪಿ.ಎಸ್. ಐರಣಿ, ಶ್ರೀ ಎಚ್.ಆರ್. ಪಾಟೀಲ್ ಭಾಗವಹಿಸಿದ್ದರು.

* ನವೆಂಬರ್ 1 ರಂದು ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ 62ನೇ ಕರ್ನಾಟಕ ರಾಜ್ಯೋತ್ಸವ ದಿನಾಚರಣೆಯ ಅಂಗವಾಗಿ ನಡೆದ ಪಥಚಲನೆಯಲ್ಲಿ ಹಾವೇರಿ ನಗರದ ಜೆ.ಪಿ. ರೋಟರಿ. ಪ್ರೌಡಶಾಲೆಯ ಸ್ಕೌಟ್ಸ್ ಕೆ.ಎಲ್.ಇ. ಪ್ರೌಢಶಾಲೆಯ ಗೈಡ್ಸ್ ತಂಡಗಳು ಭಾಗವಹಿಸಿದ್ದು, ಅದರಲ್ಲಿ ಪ್ರಥಮ ಸ್ಥಾನ ಕೆ.ಎಲ್.ಇ. ಪ್ರೌಢಶಾಲೆಯ ಗೈಡ್ಸ್ ತಂಡಕ್ಕೆ ಮತ್ತು ದ್ವಿತೀಯ ಸ್ಥಾನ ಜೆ.ಪಿ. ರೋಟರಿ. ಪ್ರೌಢಶಾಲೆಯ ಸ್ಕೌಟ್ಸ್ ತಂಡಕ್ಕೆ ದೊರಕಿತು. ಶ್ರೀ ಕೊಟ್ರೇಶಪ್ಪ. ರು. ಬಸೇಗಣ್ಣಿ, ಅಧ್ಯಕ್ಷರು ಜಿಲ್ಲಾ ಪಂಚಾಯತ ಹಾವೇರಿ ಶ್ರೀ ಯಲ್ಲಪ್ಪ ಮ. ಮಣ್ಣೂರ. ಅಧ್ಯಕ್ಷರು ತಾಲೂಕ ಪಂಚಾಯತ ಹಾವೇರಿ. ಶ್ರೀಮತಿ ಪಾರ್ವತೆಮ್ಮ ಶಿ. ಹಲಗಣ್ಣನವರ. ಅಧ್ಯಕ್ಷರು ನಗರಸಭೇ ಹಾವೇರಿ ಡಾ॥ ವೆಂಕಟೇಶ ಎಮ್.ವಿ. ಜಿಲ್ಲಾಧಿಕಾರಿಗಳು. ಶ್ರೀ ಪರಶುರಾಮ.ಕೆ. ಪೋಲೀಸ ವರಿಷ್ಠ ಅಧಿಕಾರಿಗಳು ಹಾವೇರಿ ಹಾಗೂ ಶ್ರೀ ಕೆ.ಬಿ. ಆಂಜನಪ್ಪ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ ಹಾವೇರಿ. ರವರು ತಂಡಗಳಿಗೆ ಶೀಲ್ಡ್ ಮತ್ತು ಪ್ರಶಸ್ತಿ ಪತ್ರ ನೀಡಿ ಗೌರವಿಸಿದರು.





* ನವೆಂಬರ್ 11 ರಂದು ಜೆ.ಪಿ. ರೋಟರಿ ಪ್ರೌಢಶಾಲೆ, ಹಾವೇರಿಯಲ್ಲಿ "ಸಂಸ್ಥಾಪನಾ ದಿನಾಚರಣೆ" ಹಾಗೂ ಧ್ವಜ ಚೀಟಿ ಬಿಡುಗಡೆ ಕಾರ್ಯಕ್ರಮವನ್ನು ಸಂಘಟಿಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀಮತಿ ಮಾಧುರಿ. ದೇವಧರ, ಜಿಲ್ಲಾ ಮುಖ್ಯ ಆಯುಕ್ತರು ವಹಿಸಿದ್ದರು. ಶ್ರೀ ಪ್ರಭಾಕರರಾವ್ ಮಂಗಳೂರ, ಅಧ್ಯಕ್ಷರು, ಜೆ.ಪಿ. ರೋಟರಿ ಪ್ರೌಢಶಾಲೆ, ಹಾವೇರಿ ಯವರು ಧ್ವಜಚೀಟಿ ಬಿಡುಗಡೆ ಮಾಡಿ ಧ್ವಜದ ಮಹತ್ವ ಮತ್ತು ಧ್ವಜದ ಗೌರವದ ಬಗ್ಗೆ ತಿಳಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಮಲ್ಲಿಕಾರ್ಜುನ ಕೊಟೂರ, ಕಾರ್ಯದರ್ಶಿ, ರೋಟರಿ ಸಂಸ್ಥೆ ಹಾಗೂ ಜಿಲ್ಲಾ ಸ್ಥಾನಿಕ ಆಯುಕ್ತರು. ಶ್ರೀ ಜಿ.ಎನ್. ಹಿರೇಗೌಡ್ರ ಸದಸ್ಯರು, ರೋಟರಿ ಸಂಸ್ಥೆ, ಹಣಕಾಸು ಸಮಿತಿ ಸದಸ್ಯರು ಶ್ರೀ ಎಮ್.ಆರ್. ಪಾಟೀಲ್ ಡಿ.ಟಿ.ಸಿ. (ಸ್ಕೌಟ್) ಶ್ರೀ ದಳವಾಯಿ, ಮುಖ್ಯೋಪಾಧ್ಯಾಯರು ಜೆ.ಪಿ. ರೋಟರಿ ಪ್ರೌಢಶಾಲೆ ಹಾವೇರಿ ಭಾಗವಹಿಸಿದ್ದರು. ಕುಮಾರಿ ವೀಣಾ ಕಮಾಟಿ, ಜಂಟಿ ಕಾರ್ಯದರ್ಶಿ ವಂದನಾರ್ಪಣೆ ಮಾಡಿದರು. ಶ್ರೀ ಎ.ಎಲ್. ಶೇಖಸೂರಣಗಿ ಡಿ.ಓ.ಸಿ., ರವರು ಕಾರ್ಯಕ್ರಮ ನಿರೂಪಣೆ ಮಾಡಿದರು.

## ಹಾಸನ

"ಹಾಸನಾಂಬೆಯ ಉತ್ಸವದ ಹಿನ್ನೆಲೆಯಲ್ಲಿ ನಗರದ ಪ್ರತಿ ವಾರ್ಡ್‌ಗಳ ಸ್ವಚ್ಛತೆ ಅನಿವಾರ್ಯ. ನಗರಸಭೆ ಹಾಗೂ ಜಿಲ್ಲಾಡಳಿತವು ನಮ್ಮ ಸ್ಕೌಟ್ಸ್-ಗೈಡ್ಸ್ ಸಂಸ್ಥೆಗೂ ಸ್ವಚ್ಛತೆಯ ಜವಾಬ್ದಾರಿ ವಹಿಸಿರುವುದು ಸ್ವಾಗತಾರ್ಹ" ಎಂದು ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಜಿಲ್ಲಾ ಕಾರ್ಯದರ್ಶಿ ಶ್ರೀ ಮುತ್ತೇಗೌಡ ಅಭಿಪ್ರಾಯಪಟ್ಟರು.

ಅಕ್ಟೋಬರ್ 9 ರಿಂದ 10ರ ವರೆಗೆ ನಗರಸಭೆ ಹಾಗೂ ಭಾರತ್ ಸ್ಕೌಟ್ಸ್-ಗೈಡ್ಸ್ ಸಹಕಾರದಲ್ಲಿ ಎನ್.ಆರ್. ವೃತ್ತದಿಂದ ಡೈರಿ ವೃತ್ತದವರೆಗೆ ಹಮ್ಮಿಕೊಂಡಿದ್ದ ಸ್ವಚ್ಛತಾ ಕಾರ್ಯಕ್ರಮದಲ್ಲಿ ಭಾಗವಹಿಸಿ ಮಾತನಾಡಿದರು. ಈ ಸಂದರ್ಭದಲ್ಲಿ ವಾಣಿವಿಲಾಸ್ ಕಾಲೇಜಿನ ರೇಂಜರ್ಸ್, ನಿವೇದಿಯ ಮುಕ್ತ ಗೈಡ್ ಕಂಪನಿಯ ಗೈಡ್‌ಗಳು ಏಕಲವ್ಯ ಮುಕ್ತ ರೋವರ್ಸ್ ದಳದ ರೋವರ್‌ಗಳು ಸೇರಿದಂತೆ ಸುಮಾರು 80ಕ್ಕೂ ಹೆಚ್ಚು ಮಂದಿ ಸ್ವಚ್ಛತಾ ಕಾರ್ಯದಲ್ಲಿ ಭಾಗವಹಿಸಿದ್ದರು.





* ಹಾಸನ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಇಡೀ ರಾಜ್ಯದಲ್ಲಿಯೇ ಆದರ್ಶಪ್ರಾಯವಾಗಿ ಕೆಲಸ ಮಾಡುತ್ತಿದೆ. ಅದರಲ್ಲೂ ಏಕಲವ್ಯ ಮುಕ್ತ ರೋವರ್ಸ್ ದಳ ಸೇರಿದಂತೆ ಜಿಲ್ಲೆಯ ಎಲ್ಲಾ ಕಾಲೇಜಿನ ರೋವರ್ಸ್-ರೇಂಜರ್ಸ್‌ಗಳು ಸಾಮಾಜಿಕವಾಗಿ ತೊಡಗಿಸಿಕೊಂಡು ಸಮುದಾಯವನ್ನು ತಮ್ಮತ್ತ ನೋಡುವಂತೆ ಮಾಡುತ್ತಿರುವುದು ಶ್ಲಾಘನೀಯವಾದುದು ಎಂದು ರಾಜ್ಯ ಸಂಸ್ಥೆಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರು ಅಭಿಪ್ರಾಯಪಟ್ಟರು.

ಅಕ್ಟೋಬರ್ 18 ರಂದು ಹಾಸನಾಂಬ ದರ್ಶನ ಪಡೆದ ನಂತರ ಪ್ರಾಂಗಣ ಹಾಗೂ ಹೊರಾಂಗಣದಲ್ಲಿ ಅಕ್ಟೋಬರ್ 12 ರಿಂದ ಸ್ವಯಂ ಸೇವಕರಾಗಿ ಸೇವೆ ಸಲ್ಲಿಸುತ್ತಿರುವ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ರೋವರ್ಸ್-ರೇಂಜರ್ಸ್, ಸ್ಕೌಟ್ಸ್-ಗೈಡ್ಸ್‌ಗಳನ್ನು ಉದ್ದೇಶಿಸಿ ಮಾತನಾಡಿದರು. ಈ ಸಂದರ್ಭದಲ್ಲಿ ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಪ್ರಕಾಶ್ ಎಸ್. ಯಾಜಿ. ಜಿಲ್ಲಾ ಕಾರ್ಯದರ್ಶಿ ಶ್ರೀ ಮುತ್ತೇಗೌಡ, ಉಪಾಧ್ಯಕ್ಷರಾದ ಜಯರಮೇಶ್, ಜಿಲ್ಲಾ ಹಾಗೂ ಇತರ ಪದಾಧಿಕಾರಿಗಳು ಹಾಜರಿದ್ದರು.

* "ಹಳೇಬೀಡು ಹೋಬಳಿ, ಕಾಶಿಪುರದ ವಿಶ್ವನಾಥ ದೇವಾಲಯದ ನಮ್ಮ ಜಿಲ್ಲೆಯ ಐತಿಹಾಸಿಕ ಸ್ಥಳ, ಆದರೆ ಸರ್ಕಾರ ಹಾಗೂ ಸಾರ್ವಜನಿಕರ ನಿರ್ಲಕ್ಷ್ಯದಿಂದ ಇಂದು ಇದು ಪಾಳುಬಿದ್ದಿದೆ. ಈ ನಿಟ್ಟಿನಲ್ಲಿ ಹಾಸನ ಜಿಲ್ಲಾ ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಕಳೆದ ಮೂರು ದಿನಗಳಿಂದ ಶ್ರಮದಾನ ಮಾಡುತ್ತಿದೆ" ಎಂದು ಜಿಲ್ಲಾ ಸಂಘಟನಾ ಆಯುಕ್ತ ಕೊಟ್ರೇಶ್ ಎಸ್. ಉಪ್ಪಾರ್ ಅಭಿಪ್ರಾಯಪಟ್ಟರು. ಬೇಲೂರು ತಾಲ್ಲೂಕು ಪಂಚಾಯಿತಿ ಸದಸ್ಯ ಶ್ರೀ ವಿಜಯಕುಮಾರ್ ಮಾತನಾಡಿ ಗತಕಾಲದ ಇತಿಹಾಸವನ್ನು, ಸಂಸ್ಕೃತಿಯನ್ನು ಬಿಂಬಿಸುವಂತಹ ಪುರಾತನ ದೇವಾಲಯಗಳನ್ನು ಸಂರಕ್ಷಣೆ ಮಾಡುವ ನಿಟ್ಟಿನಲ್ಲಿ ಎಲ್ಲರ ಸಹಕಾರ ಆಗುವುದಾಗಿದೆ ಎಂದರು.

ನವೆಂಬರ್ 2 ರಿಂದ 11 ರ ವರೆಗೆ ಹಳೇಬೀಡು ಹೋಬಳಿಯ ಅಡಗೂರಿನ ಸಮೀಪವಿರುವ ವಿಶ್ವನಾಥ ದೇವಾಲಯದಲ್ಲಿ ಹಾಸನ ಜಿಲ್ಲಾ ಭಾರತ್ ಸ್ಕೌಟ್ಸ್-ಗೈಡ್ಸ್‌ಗಳು ಹಮ್ಮಿಕೊಂಡಿರುವ ಶ್ರಮದಾನದಲ್ಲಿ ಮಾತನಾಡಿದರು.

* ಹಾಸನದ ಎ.ವಿ.ಕೆ. ಕಾಲೇಜು ಮಹಿಳಾ ಸರ್ಕಾರಿ ಪ್ರಥಮದರ್ಜೆ ಕಾಲೇಜು, ಕಲಾ ಕಾಲೇಜು, ಎನ್.ಡಿ.ಆರ್.ಕೆ. ಕಾಲೇಜು, ವಿಜ್ಞಾನ ಕಾಲೇಜು, ಏಕಲವ್ಯಮುಕ್ತದಳ ಇವರುಗಳಿಗೆ ಸೇರಿ 60ಕ್ಕೂ ಹೆಚ್ಚು ರೋವರ್-ರೇಂಜರ್‌ಗಳು ಈ ಶ್ರಮದಾನದಲ್ಲಿ ಭಾಗವಹಿಸಿದ್ದರು.

* ಭಾರತ್ ಸ್ಕೌಟ್ಸ್-ಗೈಡ್ಸ್ ಹಾಸನ ಜಿಲ್ಲೆಯಲ್ಲಿ ಅತ್ಯುತ್ತಮ ಸೇವೆಯನ್ನು ಮಾಡುತ್ತಿದೆ. ಇತ್ತೀಚೆಗೆ ಮುಕ್ತಾಯವಾದ ಹಾಸನಾಂಬ ಉತ್ಸವದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳ ಸೇವೆಯನ್ನು ಇಡೀ ಜಿಲ್ಲೆ ಮನಗಂಡಿದೆ ಎಂದು ಹಾಸನ ತಾಲ್ಲೂಕು ದಂಡಾಧಿಕಾರಿಗಳಾದ ಶ್ರೀ ಶಿವಶಂಕರಪ್ಪನವರು ಅಭಿಪ್ರಾಯಪಟ್ಟರು. ಅವರು ನಗರದ ಸ್ಕೌಟ್ಸ್-ಗೈಡ್ಸ್ ಭವನದಲ್ಲಿ ಕರ್ನಾಟಕ ಪ್ರವಾಸೋದ್ಯಮ ಇಲಾಖೆ ಹಾಗೂ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಹಮ್ಮಿಕೊಂಡಿದ್ದ 2017-18 ನೇ ಸಾಲಿನ ಕರ್ನಾಟಕ ದರ್ಶನಕ್ಕೆ ಚಾಲನೆ ನೀಡಿ ಮಾತನಾಡಿದರು. ಈ ಸಂದರ್ಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಡಾ. ವೈ.ಎಸ್. ವೀರಭದ್ರಪ್ಪ ಹಾಗೂ ಇತರೆ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.

* ಬಿ.ಪಿ. ಸಿಕ್ಸ್ ವ್ಯಾಯಾಮಗಳು ಮಗುವಿನ ಸರ್ವಾಂಗಗಳ ಬೆಳವಣಿಗೆಗೆ ಪೂರಕವಾಗಿದೆ. ಸರಿಯಾದ ರಕ್ತ ಚಲನೆಗೆ, ನಿಯಮಬದ್ಧವಾದ ಉಸಿರಾಟಕ್ಕೆ, ಜೀರ್ಣಾಂಗ ವ್ಯವಸ್ಥೆಗಳನ್ನು ಸುಧಾರಿಸುವಲ್ಲಿ ಹಾಗೂ ಅಡಿಯಿಂದ ಮುಡಿಯವರೆಗೆ ಕ್ರಿಯಾಶೀಲಗೊಳಿಸಲು ಅತ್ಯುಪಯುಕ್ತವಾಗಿದೆ ಎಂದು ಜಿಲ್ಲಾ ಸ್ಕೌಟ್ಸ್ ತರಬೇತಿ ಆಯುಕ್ತರಾದ ಶ್ರೀ ಎಂ.ಎಸ್. ಪ್ರಕಾಶ್ ಅಭಿಪ್ರಾಯಪಟ್ಟರು.

ಅವರು ನಗರದ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಮುದಾಯ ಭವನದಲ್ಲಿ ಪ್ರಾಥಮಿಕ ಹಾಗೂ ಪ್ರೌಢಶಾಲಾ ಶಿಕ್ಷಕರಿಗಾಗಿ ನಡೆಯುತ್ತಿರುವ ಕಬ್ಸ್ ಮಾಸ್ಟರ್, ಫ್ಲಾಕ್ ಲೀಡರ್, ಸ್ಕೌಟ್ಸ್ ಮಾಸ್ಟರ್-ಗೈಡ್ ಕ್ಯಾಪ್ಟನ್ ಮೂಲತರಬೇತಿ ಶಿಬಿರದಲ್ಲಿ ಬಿ.ಪಿ.ಸಿಕ್ಸ್, ವ್ಯಾಯಾಮ ಕುರಿತು ಪ್ರಾತ್ಯಕ್ಷಿಕೆ ನೀಡಿ ಮಾತನಾಡಿದರು.

ಗೈಡ್ ತರಬೇತಿ ಆಯುಕ್ತರಾದ ಶ್ರೀಮತಿ ಕಾಮೇಶ್ವರಿ ಭಟ್, ಕಬ್ ವಿಭಾಗದ ನಾಯಕಿ ಶ್ರೀಮತಿ ಜೂಲಿಯಾನ ಲಸ್ರೋದ, ಮುಂತಾದವರು ಹಾಜರಿದ್ದರು.

## ಕೊಪ್ಪಳ

ನವೆಂಬರ್ 7 ರಂದು ಮಾನ್ಯ ಶಾಸಕರಾದ ಶ್ರೀ ರಾಘವೇಂದ್ರ ಹಿಟ್ನಾಳ್, ವಾರ್ತಾ ಇಲಾಖೆಯ ಸಹಾಯಕ ನಿರ್ದೇಶಕರಾದ ಶ್ರೀ ತುಕಾರಾಮ್, ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರು, ಅಪರ ಜಿಲ್ಲಾಧಿಕಾರಿಗಳಾದ ಶ್ರೀ ರುದ್ರೇಶ್ ಗಾಳಿ, ಜಿಲ್ಲಾ ಪಂಚಾಯತಿಯ ಉಪಕಾರ್ಯದರ್ಶಿ ಶ್ರೀ ರವಿ ಬಿಸರಳ್ಳಿ, ಜಿಲ್ಲಾ ಆರೋಗ್ಯಾಧಿಕಾರಿಗಳಾದ ಡಾ. ರಾಮಕೃಷ್ಣ ಇವರುಗಳಿ ಸಮ್ಮುಖದಲ್ಲಿ ಸಂಸ್ಥೆಯ ಧ್ವಜಚೀಟಿಯನ್ನು ಬಿಡುಗಡೆಗೊಳಿಸಲಾಯಿತು.

ಈ ಸಂದರ್ಭದಲ್ಲಿ ಸಂಸ್ಥೆಯ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಹೆಚ್. ಎಂ. ಸಿದ್ಧರಾಮಸ್ವಾಮಿ, ಜಿಲ್ಲಾ ಆಯುಕ್ತರುಗಳಾದ ಶ್ರೀಮತಿ ಅರುಣಾ ವಸ್ತ್ರದ್ ಹಾಗೂ ಶ್ರೀ ಮಲ್ಲಿಕಾರ್ಜುನ ಚೌಕಿಮಠ್ ಇತರೆ ಪದಾಧಿಕಾರಿಗಳು ಹಾಜರಿದ್ದರು.

## ಕೋಲಾರ

"ಕನ್ನಡ ನಾಡಿನ ಭವ್ಯ ಸಂಸ್ಕೃತಿ ಮತ್ತು ಆಚಾರ ವಿಚಾರಗಳನ್ನು ಮುಂದಿನ ಪೀಳಿಗೆಗೆ ಮುಂದುವರೆಸಿಕೊಂಡು ಹೋಗುವಲ್ಲಿ ನಾಡಿನ ಯುವಶಕ್ತಿಯು ಆಸಕ್ತಿವಹಿಸಿ ಪೋಷಿಸಿದಾಗ ಮಾತ್ರ ನಮ್ಮ ಹಿರಿಯರ ಮಾರ್ಗದರ್ಶನ ಉಳಿಯಲು ಸಾಧ್ಯ" ಎಂದು ಕೋಲಾರ ಜಿಲ್ಲೆಯ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ.ವಿ. ಶಂಕರಪ್ಪ ಹೇಳಿದರು. ಅವರು ಜಿಲ್ಲಾ ಸಂಸ್ಥೆ ಆಯೋಜಿಸಿದ್ದ ಕನ್ನಡ ರಾಜ್ಯೋತ್ಸವದ ದಿನಾಚರಣೆಯ ಅಂಗವಾಗಿ ಮೆರವಣಿಗೆಯ ಸ್ಥಬ್ಧಚಿತ್ರಕ್ಕೆ ಹಸಿರು ನಿಶಾನೆ ತೋರಿಸುವ ಮೂಲಕ ಚಾಲನೆ ನೀಡಿ ಮಾತನಾಡಿದರು.

ಈ ಸಂದರ್ಭದಲ್ಲಿ ಇತರೆ ಪದಾಧಿಕಾರಿಗಳು ಜಿಲ್ಲೆಯ ವಿವಿಧ ಕಾಲೇಜುಗಳ ರೋವರ್ಸ್, ರೇಂಜರ್ಸ್, ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ಅಕ್ಟೋಬರ್ 30 ರಂದು ಜಿಲ್ಲಾ ಸಂಸ್ಥೆಯ ವತಿಯಿಂದ ರಾಷ್ಟ್ರೀಯ ಏಕತಾ ದಿನಾಚರಣೆಯನ್ನು ಕೋಲಾರ ನಗರದ ರವಿ ಬಿ.ಎಡ್, ಕಾಲೇಜಿನಲ್ಲಿ ನಡೆಸಲಾಯಿತು. ಕಾಲೇಜಿನ ನಿರ್ದೇಶಕರಾದ ಶ್ರೀ ನರೇಶ್ ಬಾಬುರವರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಮಂಜುನಾಥ ರೆಡ್ಡಿ, ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಕೆ.ಆರ್. ಸುರೇಶ್, ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ವಿ. ಬಾಬು ರವರು ಹಾಗೂ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು.



* ನವೆಂಬರ್ 1 ಜಿಲ್ಲಾ ಮಟ್ಟದ ಕನ್ನಡ ರಾಜ್ಯೋತ್ಸವದ ಸ್ಥಬ್ದ ಚಿತ್ರಗಳ ಮೆರವಣಿಗೆಯಲ್ಲಿ ಸಂಸ್ಥೆ ವತಿಯಿಂದ **"ನಾನು ಭೂಮಿತಾಯಿ ನನ್ನನ್ನು ನೋಯಿಸಬೇಡಿ"** ಎಂಬ ಸಂದೇಶದೊಂದಿಗೆ ಪರಿಸರ ಮತ್ತು ಭೂಮಿಯ ಉಳಿವಿಗೆ ಮನುಷ್ಯ ತನ್ನ ಸ್ವಾರ್ಥ ಬಿಟ್ಟು ಪರಿಸರ ಉಳಿಸೋಣ ಎಂಬ ಜಾಗೃತಿಯನ್ನು ಮೂಡಿಸಲಾಯಿತು. ಈ ಸಮಾರಂಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ, ಜಿಲ್ಲಾ ಆಯುಕ್ತರಾದ ಶ್ರೀ ಕೆ.ಆರ್. ಸುರೇಶ್ ರವರು ಭಾಗವಹಿಸಿ ಮೆರವಣಿಗೆಯಲ್ಲಿ ಸಂಸ್ಥೆಯ ಚಟುವಟಿಕೆಗಳ ಚಿತ್ರಗಳು, ನಾಡಿನ ವೀರನಾಯಕ/ನಾಯಕಿಯರ ವೇಷಭೂಷಣಗಳನ್ನು ಹಾಕಲಾಯಿತು. ಜಿಲ್ಲಾ ಸಂಸ್ಥೆಗೆ ವಿಶೇಷ ಬಹುಮಾನ ಲಭಿಸಿತು.

* ನವೆಂಬರ್ 4 ರಂದು ಜಿಲ್ಲೆಯ ವಿವಿಧ ಸಂಘ ಸಂಸ್ಥೆಗಳಿಂದ ಕೆರೆ ಸಂರಕ್ಷಣೆಯ ಬಗ್ಗೆ ಜನರಿಗೆ ಅರಿವು ಮೂಡಿಸುವ ಸಲುವಾಗಿ "ಕೆರೆ ಅಪ್ಪಿಕೊ" ಎಂಬ ಮಾನವ ಸರಪಳಿಯನ್ನು ಆಯೋಜಿಸಲಾಗಿತ್ತು. ಜಿಲ್ಲೆಯ ಕೋಲಾರ ನಗರದ ಮಹಿಳಾ ಕಾಲೇಜು ಮತ್ತು ಬಾಲಕರ ಕಾಲೇಜಿನ ರೋವರ್ಸ್ ಮತ್ತು ರೇಂಜರ್ಸ್‌ಗಳು ಭಾಗವಹಿಸಿದ್ದರು.

* ನವೆಂಬರ್ 7 ರಂದು ಜಿಲ್ಲಾ ಮಟ್ಟದ ಸಂಸ್ಥಾಪನಾ ದಿನಾಚರಣೆಯನ್ನು ಮುಳಬಾಗಿಲು ಪಟ್ಟಣದ ರಾಮಪ್ರಿಯ ಶಾಲಾ ಆವರಣದಲ್ಲಿ ಆಯೋಜಿಸಲಾಗಿತ್ತು. ಈ ಸಮಾರಂಭದಲ್ಲಿ ಮುಳಬಾಗಿಲು ತಾಲ್ಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ

ಶ್ರೀ ಕೆಂಪರಾಮ್ ರವರು ಸ್ಕೌಟ್ಸ್-ಗೈಡ್ಸ್ ಧ್ವಜಗಳನ್ನು ಬಿಡುಗಡೆ ಮಾಡಿ ಶುಭಕೋರಿದರು. ಈ ಸಮಾರಂಭದಲ್ಲಿ ಜಿಲ್ಲಾ ಪದಾಧಿಕಾರಿಗಳು ಹಾಜರಿದ್ದರು.

* ನವೆಂಬರ್ 7 ರಿಂದ 8 ರ ವರೆಗೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಮುಳಬಾಗಿಲು, ಸರ್ಕಾರಿ ಪ್ರಾಥಮಿಕ ಶಾಲೆ ಮಾಸ್ತೇನಹಳ್ಳಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಮಾಸ್ತೇನಹಳ್ಳಿ, ಚಿನ್ನದ ಗಣಿ ಬಿ.ಎಡ್. ಕಾಲೇಜು, ಬಂಗಾರಪೇಟೆ, ಮೊರಾರ್ಜಿ ದೇಸಾಯಿ ವಸತಿ ಶಾಲೆ ಯಳೆಸಂದ್ರ, ಸರ್ಕಾರಿ ಪ್ರೌಢಶಾಲೆ ಗುಲ್ಲಹಳ್ಳಿ, ಬಿ.ಆರ್.ಸಿ. ಕೋಲಾರ, ಸರ್ಕಾರಿ ಪ್ರೌಢಶಾಲೆ ಗುಲ್ಲಹಳ್ಳಿ, ಸರ್ಕಾರಿ ಪ್ರೌಢ ಶಾಲೆ ಬೂದಿಕೋಟೆಯಲ್ಲಿ ಧ್ವಜ ದಿನಾಚರಣೆ ಆಯೋಜಿಸಲಾಗಿತ್ತು.



* ನವೆಂಬರ್ 11 ರಿಂದ 12 ರ ವರೆಗೆ ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ ಯಳೇಸಂದ್ರದಲ್ಲಿ 8ನೇ ಜಿಲ್ಲಾ ಮಟ್ಟದ ವೃಕ್ಷಮಣಿಧಾರಕರ ಸಮಾವೇಷವನ್ನು ಆಯೋಜಿಸಲಾಗಿತ್ತು. ಜಿಲ್ಲೆಯ 27 ವೃಕ್ಷಮಣಿಧಾರಕರು ಭಾಗವಹಿಸಿದ್ದರು.



* ನವೆಂಬರ್ 14 ರಂದು ಗುಲ್ಲಹಳ್ಳಿ ಪ್ರೌಢಶಾಲೆಯಲ್ಲಿ ಮಕ್ಕಳ ದಿನಾಚರಣೆಯನ್ನು ಆಚರಿಸಲಾಯಿತು. ಪ್ರೌಢಶಾಲೆಯ ಪ್ರಭಾರಿ ಮುಖ್ಯ ಶಿಕ್ಷಕರಾದ ಶ್ರೀ ರಾಜೇಂದ್ರ ರವರು ಮಕ್ಕಳ ದಿನಾಚರಣೆಯ ಅಂಗವಾಗಿ ಏರ್ಪಡಿಸಿದ್ದ ವಿವಿಧ ಸ್ಪರ್ಧೆಗಳ ವಿಜೇತರಿಗೆ ಬಹುಮಾನ ವಿತರಿಸಿದರು. ಇದೇ ದಿನಾ ಸ್ಕೌಟ್ಸ್-ಗೈಡ್ಸ್‌ಗಳಿಂದ ಸೈಕಲ್ ಜಾಥಾ ಮೂಲಕ ಪರಿಸರ ಸಂರಕ್ಷಣೆ, ನೀರಿನ ಮಿತ ಬಳಕೆ ಬಗ್ಗೆ ಅರಿವು ಮೂಡಿಸಲಾಯಿತು. ಹಿರಿಯ ಸ್ಕೌಟ್ ಮಾಸ್ಟರ್ ನಂಜುಂಡಪ್ಪ, ಜಿಲ್ಲಾ ಸಂಘಟಕ ಬಾಬು ವಿ. ಗೈಡ್ ಶಿಕ್ಷಕಿಯಾದ ಶ್ರೀಮತಿ ಸುಮಿತ್ರ, ಶ್ರೀಮತಿ ವನಿತಾ, ಶ್ರೀಮತಿ ಕಲಾ, ಶ್ರೀಮತಿ ಶಾಂತ ಕುಮಾರಿ, ಮಂಜುಳ, ರೇಖಾ ರವರುಗಳು ಉಪಸ್ಥಿತರಿದ್ದರು.



* ನವೆಂಬರ್ 11 ರಿಂದ 12 ರ ವರೆಗೆ ಜಿಲ್ಲಾ ಮಟ್ಟದ ಸಮುದಾಯ ಅಭಿವೃದ್ಧಿ ಶಿಬಿರವನ್ನು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಕಾಡಹಳ್ಳಿ ಶಾಲೆಯಲ್ಲಿ ಆಯೋಜಿಸಲಾಗಿತ್ತು. ಈ ಶಿಬಿರದ ಉದ್ಘಾಟನೆಯನ್ನು ಕೋಲಾರ ಸ್ಥಳೀಯ ಸಂಸ್ಥೆಯ ಪರಿಷತ್ ಅಧ್ಯಕ್ಷರಾದ ಶ್ರೀ ಕಾಡಹಳ್ಳಿ ಶಶಿಕುಮಾರ್ ರವರು ನೆರವೇರಿಸಿದರು. ಈ ಸಂದರ್ಭದಲ್ಲಿ ಎ.ಡಿ.ಸಿ. ಶ್ರೀ ಅಶ್ವಥ್ ನಾರಾಯಣ ಮತ್ತು ರೋವರ್ಸ್ ಮತ್ತು ರೇಂಜರ್ಸ್‌ಗಳು ಭಾಗವಹಿಸಿದ್ದರು.

## ಕೊಡಗು

ಅಕ್ಟೋಬರ್ 17ರಂದು ಕೊಡಗು ಜಿಲ್ಲೆ ತಲಕಾವೇರಿಯಲ್ಲಿ ಜರುಗಿದ ತೀರ್ಥೋದ್ಭವ ಕಾರ್ಯಕ್ರಮದಲ್ಲಿ ವಿರಜಪೇಟೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ರೋವರ್ಸ್ – ರೇಂಜರ್ಸ್ ಮತ್ತು ಸ್ಕೌಟ್ ಮಾಸ್ಟರ್‌ಗಳು ಸೇವೆಯಲ್ಲಿ ತೊಡಗಿರುವುದು.



## ಮೈಸೂರು



...ಂಬರ್ 8 ರಿಂದ 14 ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್, ಮೈಸೂರು ಜಿಲ್ಲಾ ...ಯಿಂದ ಸ್ಕೌಟ್ ಮಾಸ್ಟರ್ / ಕಬ್ ಮಾಸ್ಟರ್ / ಗೈಡ್ ಕ್ಯಾಪ್ಟನ್ / ಫ್ಲಾಕ್ ... ಮೂಲ ತರಬೇತಿ ಶಿಬಿರವನ್ನು ಮೈಸೂರಿನ ಶ್ರೀ ಜಯಚಾಮರಾಜೇಂದ್ರ ...ಡ್ಸ್ ಭವನದ ಆವರಣದಲ್ಲಿ ಆಯೋಜಿಸಲಾಗಿತ್ತು.

...ಮೂಲ ತರಬೇತಿ ಶಿಬಿರದಲ್ಲಿ 33 ಸ್ಕೌಟ್ ಮಾಸ್ಟರ್, 17 ಗೈಡ್ ಕ್ಯಾಪ್ಟನ್, 17 ...ಟರ್, ಮತ್ತು 11 ಕಬ್ ಮಾಸ್ಟರ್‌ಗಳು ತರಬೇತಿಯನ್ನು ಪಡೆದುಕೊಂಡರು. ಶ್ರೀ ಆನಂದ ಅಡಿಗ ಎಲ್.ಟಿ.(ಸ್ಕೌ) ...ಶ್ರೀಮತಿ ಮಹಾಲಕ್ಷ್ಮಿ ಎ.ಎಲ್.ಟಿ. (ಗೈಡ್) ಗೈಡ್ ವಿಭಾಗಕ್ಕೆ, ಶ್ರೀಮತಿ ರಾಧಮ್ಮ ಎಲ್.ಟಿ. (ಕಬ್) ಕಬ್ ವಿಭಾಗಕ್ಕೆ ...ತಿ ನಾಗರತ್ನಮ್ಮ ಎ.ಎಲ್.ಟಿ. (ಬು) ಬುಲ್ ಬುಲ್ ವಿಭಾಗಗಳ ನಾಯಕರುಗಳಾಗಿ ಕಾರ್ಯ ನಿರ್ವಹಿಸಿದರು.



ನವೆಂಬರ್ 8 ರಂದು ಶ್ರೀಮತಿ ಮಂಜುಳ ಉಪನಿರ್ದೇಶಕರು (ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ಜಿಲ್ಲೆ ಹಾಗೂ ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್-ಗೈಡ್ಸ್, ಮೈಸೂರು ಜಿಲ್ಲೆ ಇವರು ಶಿಬಿರವನ್ನು ಉದ್ಘಾಟಿಸಿದರು. ಶಿಕ್ಷಕರುಗಳು, ಶಿಬಿರದ ನಂತರ ಶಾಲೆಗಳಲ್ಲಿ ದಳಗಳನ್ನು ಪ್ರಾರಂಭಿಸಿ ಮಕ್ಕಳಲ್ಲಿ ಶಿಸ್ತು ಬೆಳೆಸಬೇಕು ಈ ಬಗ್ಗೆ ತಾವು ಕಾಳಜಿ ಬೆಳೆಸಿಕೊಳ್ಳಬೇಕು ಎಂದು ತಿಳಿಸಿದರು.

...ಸ್ತಾವಿಕ ಭಾಷಣ ಮಾಡಿದ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಅಬ್ದುಲ್ ಜಮೀಲ್ ರವರು ಮೂಲ ತರಬೇತಿ ...ಗ್ಗೆ ಮಾಹಿತಿಯನ್ನು ನೀಡಿದರು. ಜಿಲ್ಲಾ ಖಜಾಂಚಿಗಳಾದ ಡಾ. ಕೆ.ಬಿ. ಗುರುಮೂರ್ತಿಯವರು ಮೈಸೂರು ... ನಡೆದು ಬಂದ ಹಾದಿಯನ್ನು ವಿವರಿಸಿ ಎಲ್ಲರನ್ನೂ ಸ್ವಾಗತಿಸಿದರು. ಸಭೆಯ ಅಧ್ಯಕ್ಷತೆ ವಹಿಸಿದ್ದ ಶ್ರೀ ಟಿ.ಎಸ್. ...ರವರು ಸ್ಕೌಟ್-ಗೈಡ್ ಶಿಕ್ಷಣದಿಂದ ಮಕ್ಕಳಲ್ಲಿ ಶಿಸ್ತು, ದೇಶಪ್ರೇಮ, ಬೆಳೆಯುತ್ತದೆ. ಈ ಬಗ್ಗೆ ತಾವು ಶಿಕ್ಷಕರುಗಳು ...ರಿವು ಮೂಡಿಸಬೇಕು ಎಂದರು. ಶ್ರೀಮತಿ ಪುಷ್ಪವಲ್ಲಿ ಜಿಲ್ಲಾ ಗೈಡ್ ಆಯುಕ್ತರು ಉಪಸ್ಥಿತರಿದ್ದರು.

...ಬರ್ 11 ರಂದು ಮೈಸೂರಿನ ಅವಧೂತ ದತ್ತಪೀಠಕ್ಕೆ ಹೊರ ಸಂಚಾರವನ್ನು ಹಮ್ಮಿಕೊಳ್ಳಲಾಗಿತ್ತು ನವೆಂಬರ್ ... ಸಂಜೆ 5 ಗಂಟೆಗೆ ಮುಕ್ತಾಯ ಸಮಾರಂಭ ... ಶ್ರೀ ಟಿ.ಎಸ್. ರವಿಶಂಕರ್ ಜಿಲ್ಲಾ ಸ್ಕೌಟ್ ಆಯುಕ್ತರು ...ಥಿಗಳಾಗಿ ಆಗಮಿಸಿದ್ದರು. ಸಭೆಯ ಅಧ್ಯಕ್ಷತೆಯನ್ನು ...ರ್ಯದರ್ಶಿಗಳಾದ ಶ್ರೀ ಅಬ್ದುಲ್ ಜಮೀಲ್ ರವರು ...ು. ಶ್ರೀಮತಿ ಸುಜಂತಾ, ಜಿಲ್ಲಾ ಜಂಟಿ ...ರ್ಗಳು ಸ್ವಾಗತ ಕೋರಿದರು. ಶ್ರೀ ಅಜಯ್



...ನ್ ಜಿಲ್ಲಾ ಸ್ಥಾನಿಕ ಆಯುಕ್ತರು(ಸ್ಕೌಟ್) ರವರು ವಂದನಾರ್ಪಣೆಗೈದರು. ಅಂದು ಸಂಜೆ 7 ಗಂಟೆಗೆ ನಡೆದ ...ಗ್ನಿ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಶ್ರೀ ಸನ್ನಿ ಜೋಸ್, ಪ್ರಾಂಶುಪಾಲರು, ಬೇಡನ್ ಪೊವೆಲ್ ಶಾಲೆ, ...ರವರು ಆಗಮಿಸಿದ್ದರು.

...ಬರ್ 14 ರ ಮಂಗಳವಾರ ಬೆಳಗ್ಗೆ 7.30 ಗಂಟೆಗೆ ಶ್ರೀ ಆನಂದ ಅಡಿಗ, ಎಲ್.ಟಿ. (ಸ್ಕೌ) ರವರ ...ನದಲ್ಲಿ ಸರ್ವಧರ್ಮ ಪ್ರಾರ್ಥನೆ ಸಮಾರಂಭ ನಡೆಯಿತು. ಈ ಶಿಬಿರಕ್ಕೆ ರಾಜ್ಯ ಸಂಸ್ಥೆಯಿಂದ ಶ್ರೀಮತಿ ಛಾಯಾ ...ರಾಜ್ಯ ಆಯುಕ್ತರು (ಗೈಡ್) ರವರು ಭೇಟಿ ನೀಡಿದ್ದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಪಿ. ವಿಶ್ವನಾಥ್ ...ರಕ್ಕೆ ಭೇಟಿ ನೀಡಿ ಶಿಬಿರಾರ್ಥಿಗಳಿಗೆ ಸ್ಕೌಟಿಂಗ್ ಚಟುವಟಿಕೆಯ ಮಹತ್ವವನ್ನು ತಿಳಿಸಿ, ಎಲ್ಲರಿಗೂ ಶುಭ ... ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಈ ಶಿಬಿರಕ್ಕೆ ಭೇಟಿ ನೀಡಿ ಶಿಬಿರ ಯಶಸ್ವಿಯಾಗಿ ನಡೆಯಲು ...ು.

## ಶಿರಸಿ



ಅಕ್ಟೋಬರ್ 3 ರಿಂದ 9 ರ ವರೆಗೆ ಮೊರಾರ್ಜಿ ದೇಸಾಯಿ ವಸತಿ ಶಾಲೆಯಲ್ಲಿ ಶಿರಸಿ ಶೈಕ್ಷಣಿಕ ಜಿಲ್ಲೆ ವ್ಯಾಪ್ತಿಯಲ್ಲಿನ ಪ್ರಾಥಮಿಕ ಮತ್ತು ಪ್ರೌಢಶಾಲೆ ಶಿಕ್ಷಕ-ಶಿಕ್ಷಕಿಯರಿಗೆ ಪ್ರಾಥಮಿಕ ಶಿಬಿರವನ್ನು ಆಯೋಜಿಸಲಾಗಿತ್ತು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾರವರು ತರಬೇತಿ ಶಿಬಿರಕ್ಕೆ ಬೇಟಿನೀಡಿ ಸ್ಕೌಟ್ಸ್-ಗೈಡ್ಸ್ ಚಳುವಳಿಯು ವಿದ್ಯಾರ್ಥಿಗಳಲ್ಲಿ ಜೀವನ ಕೌಶಲ್ಯಗಳನ್ನು ಕಲಿಸುವ ಶಿಕ್ಷಣವಾಗಿದ್ದು ಅದು ಇಷ್ಟೊಂದು ಬೃಹತ್ ಪ್ರಮಾಣದಲ್ಲಿ ಬೆಳೆಯುವಲ್ಲಿ ಶಿಕ್ಷಕರ ಅಪಾರ ಶ್ರಮವಿದ್ದು, ಅವರನ್ನು ಅಭಿನಂದಿಸಿದರು. ಈ ಸಮಾರಂಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಮ್.ಎಮ್. ಭಟ್ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ವಿ.ಎಚ್. ಭಟ್ಕಳ, ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಜ್ಯೋತಿ ಭಟ್ ತರಬೇತಿ ನಾಯಕರುಗಳಾದ ಶ್ರೀ ಬಿ.ಡಿ. ಫರ್ನಾಂಡೀಸ್ ಶ್ರೀಮತಿ ಲಕ್ಷ್ಮೀ ಎಮ್. ಹಾಗೂ ಇತರೆ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.

* ಅಕ್ಟೋಬರ್ 11 ರಿಂದ 13 ರ ವರೆಗೆ ಹಳಿಯಾಳ ತಾಲೂಕಿನ ಭಾಗವತಿ ಸರಕಾರಿ ಪ್ರೌಢಶಾಲೆಯಲ್ಲಿ "ಪಟಾಲಂ ನಾಯಕರ" ತರಬೇತಿ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ಶಿರಸಿ ಶೈಕ್ಷಣಿಕ ಜಿಲ್ಲೆಯ ಜಿಲ್ಲಾ ಆಯುಕ್ತರಾದ ಶ್ರೀ ವಿ.ಎಚ್. ಭಟ್ಕಳ ಶಿಬಿರವನ್ನು ಉದ್ಘಾಟಿಸಿದರು. ಸಭಾಕಾರ್ಯಕ್ರಮದ ಅಧ್ಯಕ್ಷತೆಯನ್ನು ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ನಾಗರಾಜ ನಾಯ್ಕ ವಹಿಸಿದ್ದರು.

ಕಾರ್ಯಕ್ರಮದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಸಮೀರ್ ಅಹಮ್ಮದ್ ಮುಲ್ಲಾ ಮಾತನಾಡಿ ಸ್ಕೌಟ್ಸ್-ಗೈಡ್ಸ್ ಮಕ್ಕಳಲ್ಲಿ ಶಿಸ್ತು ಮತ್ತು ಚಾರಿತ್ರ್ಯ ನಿರ್ಮಾಣ ಮಾಡುತ್ತದೆ. ಎಂದು ಹೇಳಿದರು. ಸ್ಥಳೀಯ ಸ್ಕೌಟ್ಸ್-ಗೈಡ್ಸ್ ಪರೀಕ್ಷಾ ವೀಕ್ಷಕಿಯರಾದ ಶ್ರೀಮತಿ ರಾಧಾ ರಾಣಿ ಮಾತನಾಡಿ ಮಕ್ಕಳಲ್ಲಿ ನಾಯಕತ್ವ ಗುಣ ಬೆಳೆಯಬೇಕಾದರೆ ಅವರನ್ನು ಸ್ಕೌಟ್ಸ್-ಗೈಡ್ಸ್‌ಗೆ ಸೇರಿಸಿ ಎಂದು ಪಾಲಕರಿಗೆ ಕರೆ ನೀಡಿದರು.

## ಶಿವಮೊಗ್ಗ

ಅಕ್ಟೋಬರ್ 10 ರಿಂದ 15 ರ ವರೆಗೆ ಜಿಲ್ಲಾ ಮಟ್ಟದ ರೋವರ್ಸ್ ಮತ್ತು ರೇಂಜರ್ಸ್ ರವರ ನಿಪುಣ್ ಪರೀಕ್ಷಾ ಶಿಬಿರವನ್ನು ಶಿವಮೊಗ್ಗ ಜಿಲ್ಲಾ ಸ್ಕೌಟ್ ಭವನದಲ್ಲಿ ಹಮ್ಮಿಕೊಳ್ಳಲಾಗಿತ್ತು.

ಅಕ್ಟೋಬರ್ 13 ರಂದು ನೋಂದಣಿ ಮೂಲಕ ಶುರುವಾದ ಈ ಶಿಬಿರದಲ್ಲಿ 47 ರೋವರ್ಸ್ ಹಾಗೂ 42 ರೇಂಜರ್ಸ್‌ಗಳು ಭಾಗವಹಿಸಿದ್ದರು. ನಿಪುಣ್ ರೋವರ್ ವಿಭಾಗಕ್ಕೆ ಶ್ರೀ ರಾಜೇಶ್ ಅವಲಕ್ಕಿ, ಎ.ಎಲ್.ಟಿ. (ರೋ), ನಿಪುಣ್ ರೇಂಜರ್ ವಿಭಾಗಕ್ಕೆ ಶ್ರೀಮತಿ ಭಾರತಿ ಡಾಯಸ, ಎ.ಎಲ್.ಟಿ.(ಜಿ), ಅಡ್ವೆಂಟರ್ (ರೋ) ಕಾರ್ಯ ನಿರ್ವಹಿಸಿದರು.



ಅಕ್ಟೋಬರ್ 14 ರಂದು ಉಡುಪಿಯ ಹಿರಿಯ ಪತ್ರಕರ್ತ ಶ್ರೀ ಅವಿನಾಶ ಕಾಮತ್ ರವರು ಅತಿಥಿ ಉಪನ್ಯಾಸಕರಾಗಿ ಆಗಮಿಸಿದ್ದರು. ಶ್ರೀ ರಾಜೇಶ್ ರವರು ಮಾತನಾಡಿ ಸಮಾಜದಲ್ಲಿ ನಮ್ಮ ಪಾತ್ರ ಹೇಗಿರಬೇಕು ನಾವು ನಡೆದುಕೊಂಡು ಹೋಗುವ ರೀತಿ ಹೇಗಿರಬೇಕು. ಮೊದಲು

ನಾವು ನಂತರ ನಮ್ಮ ಮನೆ, ಸರಿಪಡಿಸಿ ನಂತರ ನನ್ನ ಊರು ಸಮಾಜ ಸುದಾರಿಸಬೇಕು ಎಂದರು. ಈ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಹೆಚ್.ಡಿ. ರಮೇಶ ಶಾಸ್ತ್ರಿಯವರು ಮಾತನಾಡುತ್ತಾ ತಾವೆಲ್ಲರು ಈ ಕ್ಯಾಂಪಿಗೆ ಬಂದು ಇಲ್ಲಿಯ ಪರೀಕ್ಷೆಯನ್ನು ಧೈರ್ಯವಾಗಿ ಎದುರಿಸಿ ಮುಂದಿನ ರಾಜ್ಯ ಪುರಸ್ಕಾರ ಹಾಗೂ ರಾಷ್ಟ್ರಪತಿ ಪುರಸ್ಕಾರ ಪ್ರಶಸ್ತಿಯನ್ನು ಪಡೆದು ಜಿಲ್ಲೆಗೆ ಗೌರವ ತರುವಂತರಾಗಿ ಎಂದು ಹೇಳಿದರು. ವೇದಿಕೆಯಲ್ಲಿ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎಸ್. ಉಮೇಶಶಾಸ್ತ್ರಿ ಹಾಗೂ ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ ರವರು ಉಪಸ್ಥಿತರಿದ್ದು ಶಿಬಿರಾರ್ಥಿಗಳನ್ನು ಉದ್ದೇಶಿಸಿ ಮಾತನಾಡಿದರು. ರೋವರ್ ಸ್ಕೌಟ್ ಲೀಡರ್ ಶ್ರೀ ಪ್ರಕಾಶ್ ರವರು ವಂದಿಸಿದರು. ಎ.ಎಸ್.ಓ.ಸಿ. ಶ್ರೀಮತಿ ಭಾರತಿ ಡಾಯಸ ಕಾರ್ಯಕ್ರಮವನ್ನು ನಿರೂಪಿಸಿದರು. ಬೆಳಗ್ಗೆ ಸರ್ವಧರ್ಮ ಪ್ರಾರ್ಥನೆ ನಡೆಯಿತು.



## ವಿಜಯಪುರ

ನಮ್ಮ ವ್ಯಕ್ತಿತ್ವ ವಿಕಸನಕ್ಕೆ ಹಾಗೂ ಜೀವನ ಕೌಶಲ್ಯಗಳ ಬೆಳವಣಿಗೆಗೆ ಸ್ಕೌಟ್ಸ್-ಗೈಡ್ಸ್ ಶಿಕ್ಷಣ ಪೂರಕವಾಗಿದ್ದು ಇದನ್ನು ಪ್ರತಿಯೊಬ್ಬರೂ ಅಳವಡಿಸಿಕೊಳ್ಳಬೇಕು ಎಂದು ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಉಪಾಧ್ಯಕ್ಷ ಶ್ರೀ ವಾಸುದೇವ ಹೆರಕಲ್ ಅವರು ಕರೆ ನೀಡಿದರು. ವಿಜಯಪುರದ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರ ಬುರಣಾಪುರದಲ್ಲಿ ಆಯೋಜಿಸಲಾಗಿದ್ದ ಧ್ವಜದಿನಾಚರಣೆಯ ಬಾವುಟಗಳನ್ನು ಬಿಡುಗಡೆ ಮಾಡಿ ಮಾತನಾಡಿದರು.

ಕಾರ್ಯಕ್ರಮದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ಪಿ.ಎಸ್. ಕುಂಬಾರ ಧ್ವಜದಿನಾಚರಣೆ ಕುರಿತು ಪ್ರಾಸ್ತಾವಿಕವಾಗಿ ಮಾತನಾಡಿದರು. ವೇದಿಕೆಯ ಮೇಲೆ ಕಬ್ ಲೀಡರ್ ಶ್ರೀ ಎಸ್.ಎಸ್. ಹುಸೇನಿ, ತರಬೇತಿ ನಾಯಕರಾಧ ಶ್ರೀ ಎಸ್.ಬಿ. ಬಜಂತ್ರಿ, ಶ್ರೀ ಎಸ್. ಎನ್. ಶಿಂಧೆ, ಶ್ರೀ ಡಿ.ಎಲ್. ಪಿಂಜಾರ ಶ್ರೀಮತಿ ಎಸ್.ಪಿ. ಅವಟಿಗೇರ ಜಿಲ್ಲಾ ಸಂಘಟಿಕ ಶ್ರೀ ಪ್ರಕಾಶ ಹದ್ಲಿ ಉಪಸ್ಥಿತರಿದ್ದರು. ಶ್ರೀ ಅಪ್ಪಾಸಾಹೇಬ ಖೋತ್ ಕಾರ್ಯಕ್ರಮ ನಿರೂಪಿಸಿದರೆ ಕೊನೆಯಲ್ಲಿ ಶ್ರೀ ಪ್ರಕಾಶ ಹದ್ಲಿ ವಂದಿಸಿದರು.

* ನವೆಂಬರ್ 7 ರಿಂದ 13 ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ವಿಜಯಪುರದ ವತಿಯಿಂದ ಸ್ಕೌಟ ಮಾಸ್ಟರ್/ಗೈಡ್ ಕ್ಯಾಪ್ಟನ್ ಹಾಗೂ ಕಬ್ ಮಾಸ್ಟರ್ ಮೂಲ ತರಬೇತಿ ಶಿಬಿರವನ್ನು, ಜಿಲ್ಲಾ ತರಬೇತಿ ಕೇಂದ್ರ ಬುರಣಾಪುರ ತಾ॥ ವಿಜಯಪುರದಲ್ಲಿ ಆಯೋಜಿಸಲಾಗಿತ್ತು. ಕಬ್ ಮಾಸ್ಟರ್ ತರಬೇತಿಗೆ ಶ್ರೀ ಎಸ್.ಎಸ್. ಹುಸೇನಿ, ಸ್ಕೌಟ್ ಮಾಸ್ಟರ್ ತರಬೇತಿಗೆ ಶ್ರೀ ಎಸ್.ಬಿ. ಬಜಂತ್ರಿ ಹಾಗೂ ಗೈಡ್ ಕ್ಯಾಪ್ಟನ್ ತರಬೇತಿಗೆ ಶ್ರೀಮತಿ ಮಲ್ಲೇಶ್ವರಿ ಜುಜಾರೆ ಇವರು ನಾಯಕರಾಗಿ ಆಗಮಿಸಿದ್ದರು. ಈ ಅವಧಿಯಲ್ಲಿಜಿಲ್ಲಾ ಸಂಸ್ಥೆಯ ಪ್ರದಾನ ಆಯುಕ್ತ ಶ್ರೀ ಸಿದ್ದಣ್ಣ ಸಕ್ರಿ, ಗೈಡ್ ಆಯುಕ್ತೆ ಶ್ರೀಮತಿ ಡಿ. ಅರುಂಧತಿ, ಶ್ರೀ ವಾಸುದೇವ ಹೆರಕಲ್ ಮುಂತಾದವರು ಭೇಟಿ ನೀಡಿದ್ದರು.

* ನವೆಂಬರ್ 12 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯಿಂದ ಜಿಲ್ಲಾ ತರಬೇತಿ ಕೇಂದ್ರದಲ್ಲಿ ಜಿಲ್ಲಾ ಸಂಸ್ಥೆ ಹಾಗೂ ಎಲ್ಲ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳಿಗೆ ಸ್ಕೌಟ್ಸ್-ಗೈಡ್ಸ್ ಮಾಹಿತಿ ಶಿಬಿರವನ್ನು ಆಯೋಜಿಸಲಾಗಿತ್ತು. ಈ ಕಾರ್ಯಕ್ರಮಕಕ್ಕೆ ಎಲ್ಲ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಕಾರ್ಯದರ್ಶಿಗಳು ಹಾಜರಾಗಿದ್ದರು. ಕಾರ್ಯಕ್ರಮದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ಪಿ.ಎಸ್. ಕುಂಬಾರ ಅವರು ಜಿಲ್ಲಾ ಹಾಗೂ ಆಯಾ ಸ್ಥಳೀಯ ಸಂಸ್ಥೆಗಳ ಸರ್ವಾಂಗೀಣ ಬಲವರ್ಧನೆಗೆ ಎಲ್ಲ ಪದಾಧಿಕಾರಿಗಳು ಕೈ ಜೋಡಿಸುವಂತೆ ಶ್ರೀ ಸಿದ್ದಣ್ಣ ಸಕ್ರಿ ಅವರು ಎಲ್ಲ ಸಹಾಯ-ಸಹಕಾರ ಹಾಗೂ ಮಾರ್ಗದರ್ಶನದಲ್ಲಿ ಜಿಲ್ಲಾ ಸಂಸ್ಥೆಯನ್ನು ಎತ್ತರಕ್ಕೆ ಬೆಳೆಸುವ ಕನಸು ಹೊತ್ತಿದ್ದು ಅದಕ್ಕೆ ಎಲ್ಲರ ಸಹಕಾರ ಕೋರಿದರು.

## ನವಂಬರ್ 07ರಂದು ರಾಜ್ಯದ ವಿವಿಧ ಜಿಲ್ಲಾ ಸಂಸ್ಥೆಗಳಲ್ಲಿ ಜರುಗಿದ "ಸಂಸ್ಥಾಪನಾ ದಿನಾಚರಣೆ ಮತ್ತು ಧ್ವಜ ಬಿಡುಗಡೆ" ಕಾರ್ಯಕ್ರಮಗಳ ವಿಹಂಗಮನೋಟ


ದಾವಣಗೆರೆ


ಚಾಮರಾಜನಗರ


ಬೆಂಗಳೂರು ಗ್ರಾಮಾಂತರ


ದಕ್ಷಿಣ ಕನ್ನಡ


ಕೊಡಗು


ಬೆಳಗಾವಿ

# Boy Scouts Forever

I was a Boy Scout once, although I couldn't tell a slip knot from a granny knot, or a reef knot from a thief knot, except that a thief knot was supposed to be used to tie up a thief, should you happen to catch one. I have never caught a thief, and wouldn't know what to do with one since I can't tie a knot. Just let him go with a warning, I suppose. Tell him to become a Boy Scout.

'Be prepared!' That's the Boy Scout motto. And a good one, too. But I never seem to be well prepared for anything, be it an exam or a journey or the roof blowing off my room. I get halfway through a speech and then forget what I have to say next. Or I make a new suit to attend a friend's wedding, and then turn up in my pyjamas.

So how did I, the most impractical of boys, become a Boy Scout? I was at boarding school in Simla when it happened.

Well, it seems a rumour had gone around the Junior school (I was still a junior then) that I was a good cook. I had never cooked anything in my life, but of course I had spent a lot of time in the tuck shop making suggestions and advising Chippu, who ran the tuck shop, and encouraging him to make more and better samosas, Jalebis, tikkes and pakoras. For my unwanted advice he would favour me with an occasional free samosa, so naturally I looked upon him as a friend and benefactor. With this qualification I was given a cookery badge and put in charge of our troop's supply of rations.

There were about twenty of us in our troop, and during the summer break our Scoutmaster, Mr. Oliver, took us on a camping expedition to Tara Devi, a Temple crowned mountain a few miles outside Simla. That first night we were put to work, peeling ptatoes, skinning onions, shelling peas and pounding masalas. These various ingredients being ready, I was asked – as the troop's cookery expert – what shoul be done with them.

'Put everything in that big degchi', I ordered. 'Pour half a tin of ghee over the lot. Add some nettle leaves and cook for half an hour'.

When this was done, everyone had a taste, but the general opinion was that the dish lacked something.

'More salt', I suggested.

More slat was added. It still lacked something.

'Add a cup of sugar', I ordered.

Sugar was added to the concoction. But still it lacked something.

'We forgot to add tomatoes', said Bimal, one of the Scouts.

'Never mind', I said. 'We have tomato sauce. Add a bottle of tomato sauce!'

'How about some vinegar?' asked another boy.

'Just the thing', I agreed. 'A cup of vinegar!'

'Now it's too sour', said one of the tasters.

'What jam did we bring?' I asked.

'Gooseberry jam'.

'Just the thing, Empty the bottle!'

The dish was agreat success. Everyone enjoyed it, including Mr. Oliver, who had no idea what went into it.

'What's this called?' he asked.



'It's an all-Indian sweet-and-sour jam-potato curry', I ventured.

'For short, just call it a Bond-bhujji', said Bimal.

I had earned my cookery badge!

***

Poor Mr Oliver! He wasn't really cut out to be a Scoutmaster, any more than I was meant to be a Scout. The following day he announced that he would give us a lesson in tracking. He would take a half-hour start and walk into the forest, leaving behind him a trail of broken twigs, chicken feathers, pine cones and chestnuts, and we were to follow the trail until we found him.

Unfortunately, we were not very good trackers. We did follow Mr Oliver's trail some way into the forest, but were distracted by a pool of clear water which looked vey inviting. Abandoning our uniforms, we jumped into the pool and had a great time romping around or just lying on the grassy banks and enjoying the sunshine. A couple of hours later, feeling hungry, we returned to our campsite and set about preparing the evening meal. Bond-bhujji again, but with further variations.

It was growing dark and we were beginning to worry about Mr. Oliver's whereabouts when he limped into camp, assisted by a couple of local villagers. Having waited for us at the far end of the forest for a couple of hours, he had decided to return by following his own trail, but in the gathering gloom he was soon lost. Some locals returning from the temple took charge of him and escorted him back to camp. He was vey angry and made us return all our good-conduct and other badges, which he stuffed into his haversack. I had to give up my cookery badge, too.

An hour later, when we were all preparing to get into our sleeping bags for the night, Mr. Oliver called out: 'Where's dinner?'

'We've had ours', said Bimal. 'Everything is finished, sir',

'Where's Bond? He's supposed to be the cook. Bond, getup and make me an omelette'.

'Can't, sir',

'Why not?'

'You have my badge. Not allowed to cook without it. Scout rule, sir'.

'Never heard of such a rule. But you can have your badges back, all of you. We return to school tomorrow'.

Mr Oliver returned to his tent in a huff. But I relented and made him an elaborate omelette, garnishing it with dandelion leaves and an extra chilli.

'Never had such an omelette before', confessed Mr Oliver, blowing outhis cheeks. 'A little too hot, but otherwise quite interesting'.

'Would you like another, sir?'

'Tomorrow, Bond, tomorrow. We'll breakfast early tomorrow'.

But we had to break up our camp very early the next day. In the early hours, a bear had strayed into our camp, entered the tent where our stores were kept, and created havoc with al our provisions, even rolling our biggest degchi down the hillside.

In the confusion and uproar that followed, the bear entered Mr Oliver's tent (he was already outside, fortunately) and came out entangled in Mr Oliver's dressing gown. It then made off in the direction of the forest.

A bear in a dressing gown? It was a comical sight. And though we were a troop of brave little Scouts, we thougt it better to let the bear keep the gown.

**– From the Book "Ruskin Bond"**

# ಶ್ರದ್ಧಾಂಜಲಿ



ಧಾರವಾಡ ಜಿಲ್ಲಾ ಸಂಸ್ಥೆಯಲ್ಲಿ ಬಹಳ ವರ್ಷಗಳಿಂದ ಸ್ಕೌಟ್ ಮಾಸ್ಟರ್‌ರಾಗಿ ಸೇವೆ ಸಲ್ಲಿಸುತ್ತಾ ಅನೇಕ ಸ್ಕೌಟ್ ಮಕ್ಕಳಿಗೆ ಮಾರ್ಗದರ್ಶನ ಮಾಡಿದ, ಎ.ಎಲ್.ಟಿ.(ಸ್ಕೌಟ್) ಆಗಿ ರಾಜ್ಯಾದ್ಯಂತ ಎಲ್ಲ ಜಿಲ್ಲೆಗಳಲ್ಲಿ ಶಿಕ್ಷಕರಿಗೆ ಸ್ಕೌಟ್ ಮಾಸ್ಟರ್ ತರಬೇತಿ ನೀಡಿದ, ರಾಜ್ಯದಲ್ಲಿ ಸಂಘಟಿಸಲಾದ ಎಪ್ಟೋ ಚಟುವಟಿಕೆಗಳಲ್ಲಿ ಸಹಾಯಕರಾಗಿ ಸೇವೆ ಸಲ್ಲಿಸಿದ ಹಾಗೂ ತನ್ನ ಸುಂದರ ಕೈ ಬರಹದಿಂದ ಕನ್ನಡ ಸಾಹಿತ್ಯದಲ್ಲಿ ಸ್ಕೌಟ್ ತರಬೇತಿ ವಿವರಗಳನ್ನು ಸಿದ್ಧಪಡಿಸಿ ತರಬೇತಿ ನೀಡುತ್ತಿದ್ದ ತರಬೇತಿ ನಾಯಕರಾದ **ಶ್ರೀ ಜಿ.ಎ. ನರಗುಂದ** ಇವರು 27 ಅಕ್ಟೋಬರ್ 2017ರಂದು ತಮ್ಮ 75ನೇ ವಯಸ್ಸಿನಲ್ಲಿ ನಿಧನರಾದರು. ಇವರು ಸ್ಕೌಟ್ ವಿಷಯಗಳಲ್ಲಿ ಪರಿಣತಿ ಪಡೆದು ಮಕ್ಕಳಿಗೂ ಶಿಕ್ಷಕರಿಗೂ ಉತ್ತಮ ಪಾಠವನ್ನು ತಿಳಿಸಿ ಅದರಲ್ಲಿ ಸಂತೋಷ ಪಡೆಯುತ್ತಿದ್ದರು.

ಇವರು ತಮ್ಮ ದುಃಖತಪ್ತ ಪತ್ನಿ, ಮಕ್ಕಳನ್ನು, ಮೊಮ್ಮಕ್ಕಳನ್ನು, ಅಪಾರ ಬಂದು ಬಳಗ ಹಾಗೂ ಸ್ನೇಹಿತರನ್ನು ಬಿಟ್ಟು ಅಗಲಿದ್ದಾರೆ. ಇವರ ಆತ್ಮಕ್ಕೆ ಭಗವಂತನು ಶಾಂತಿ ದಯಪಾಲಿಸಲೆಂದು ಹಾಗೂ ಇವರ ಕುಟುಂಬಕ್ಕೆ ದುಃಖಭರಿಸುವ ಶಕ್ತಿಯನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತೇವೆ.



**ಡಾ. ಪಿ.ವಿ. ರತ್ನೇ ಅರಸ್** ರವರು 27 ಅಕ್ಟೋಬರ್ 2017ರಂದು ಮೈಸೂರಿನಲ್ಲಿ ನಿಧನರಾಗಿರುತ್ತಾರೆ. ಇವರು ಮೈಸೂರು ಗ್ರಾಮಾಂತರ ಜಿಲ್ಲೆಯಲ್ಲಿ ಜಿಲ್ಲಾ ಗೈಡ್ ಆಯುಕ್ತರಾಗಿ, ಸಹಾಯಕ ರಾಜ್ಯ ಆಯುಕ್ತರು (ಗೈಡ್) ಅಗಿ, ಮೈಸೂರು ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾಗಿ ಹಾಗೂ 2017, 22ನೇ ಸಾಲಿಗೆ ಮೈಸೂರು ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಪರಿಷತ್ ಸಭೆಗೆ ಆಜೀವ ಸದಸ್ಯರ ಪ್ರತಿನಿಧಿಯಾಗಿ ಆಯ್ಕೆಯಾಗಿ ಉತ್ತಮವಾಗಿ ಕಾರ್ಯವನ್ನು ಸಲ್ಲಿಸಿರುತ್ತಾರೆ.

ಇವರು ಸ್ಕೌಟ್ಸ್-ಗೈಡ್ಸ್ ಸಂಸ್ಥೆಯಲ್ಲಿ ಸಲ್ಲಿಸಿರುವ ಉತ್ತಮ ಸೇವೆಯನ್ನು ಪರಿಗಣಿಸಿ ರಾಷ್ಟ್ರೀಯ ಸಂಸ್ಥೆಯವರು ನೀಡುವ ಸಿಲ್ವರ್ ಸ್ಟಾರ್ ಪ್ರಶಸ್ತಿ, **WAGGGS** ನವರಿಂದ ಪ್ರಶಸ್ತಿ ಪಡೆದುಕೊಂಡಿರುತ್ತಾರೆ. ಅಲ್ಲದೇ ಇವರು ಸಂಸ್ಥೆಗೆ ಸಲ್ಲಿಸಿರುವ ಸೇವೆಯನ್ನು ಪರಿಗಣಿಸಿ ಮೈಸೂರು ಜಿಲ್ಲಾ ಸಂಸ್ಥೆ ಮತ್ತು ರಾಜ್ಯ ಸಂಸ್ಥೆಯವರು ಇವರನ್ನು ಸನ್ಮಾನಿಸಿರುತ್ತಾರೆ.

ಇವರ ಆತ್ಮಕ್ಕೆ ಶಾಂತಿ ಸಿಗಲೆಂದು ಹಾಗೂ ಇವರ ಕುಟುಂಬಕ್ಕೆ ದುಃಖಭರಿಸುವ ಶಕ್ತಿಯನ್ನು ನೀಡಲೆಂದು ಭಗವಂತನನ್ನು ಪ್ರಾರ್ಥಿಸುತ್ತೇವೆ.



**ಶ್ರೀಮತಿ ಶೋಭಾತಾಯಿ ಕರ್ಜಗಿ,** ಉಪಾಧ್ಯಕ್ಷರು, ಭಾ.ಸ್ಕೌ & ಗೈ ಜಿಲ್ಲಾ ಸಂಸ್ಥೆ ಹಾವೇರಿ ಅವರು ತಮಿಳುನಾಡು ರಾಜ್ಯ ಕಂಚಿಗೆ ಹೋಗುವ ಪ್ರವಾಸದ ವೇಳೆಯಲ್ಲಿ ಹೃದಯಘಾತವಾಗಿ ನವಂಬರ್ 11, 2017ರಂದು ತಮ್ಮ 70ನೇ ವಯಸ್ಸಿನಲ್ಲಿ ನಿಧನರಾದರು.

ಇವರು ರಾಣೆಬೆನ್ನೂರು ತಾ॥ ಸಂಸ್ಥೆಯ ಜಿಲ್ಲಾ ಸಹಾಯಕ ಗೈಡ್ ಆಯುಕ್ತರಾಗಿ ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ಸೇವೆಯನ್ನು ಪ್ರಾರಂಭಿಸಿ ಜಿಲ್ಲಾ ಸಂಸ್ಥೆಯಲ್ಲಿ ಅನೇಕ ವರ್ಷಗಳಕಾಲ ಜಿಲ್ಲಾ ಗೈಡ್ ಆಯುಕ್ತರಾಗಿ, ಉಪಾಧ್ಯಕ್ಷರಾಗಿ ಸೇವೆಯನ್ನು ಸಲ್ಲಿಸಿರುತ್ತಾರೆ. ವಿವಿದ ಅನೇಕ ಸಂಘ ಸಂಸ್ಥೆಗಳಲ್ಲಿ, ರೋಟರಿ ಸಂಸ್ಥೆಯಲ್ಲಿ, ಇನ್ನರವೀಲ್, ಮಹಿಳಾ ಬ್ಯಾಂಕಗಳಲ್ಲಿ ಅಪಾರವಾದ ಸೇವೆಯನ್ನು ಸಲ್ಲಿಸಿರುತ್ತಾರೆ. ಅಪಾರ ಬಂದು ಬಳಗ ಹಾಗೂ ಸ್ನೇಹಿತರನ್ನು ಅಗಲಿದ್ದಾರೆ.

ಇವರ ಆತ್ಮಕ್ಕೆ ಭಗವಂತ ಶಾಂತಿ ದಯಪಾಲಿಸಲೆಂದು ಹಾಗೂ ಇವರ ಕುಟುಂಬಕ್ಕ ದುಃಖಭರಿಸುವ ಶಕ್ತಿಯನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತೇವೆ.

**– ರಾಜ್ಯ ಕಾರ್ಯದರ್ಶಿ**

**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆ, 7 ನವೆಂಬರ್ 2017ರಂದು ಬೆಂಗಳೂರು ನಗರದಲ್ಲಿ "67ನೇ ಸಂಸ್ಥಾಪನಾ ದಿನಾಚರಣೆ ಮತ್ತು ಧ್ವಜ ಬಿಡುಗಡೆ" ಸಂದರ್ಭದಲ್ಲಿ ಶಾಂತಿಗೃಹ ಆವರಣದಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ ಆಯುಕ್ತರು ಮತ್ತು ನಿರ್ದೇಶಕರುಗಳು ಹಾಗೂ ಹಿರಿಯ ಅಧಿಕಾರಿಗಳಿಂದ ಧ್ವಜಚೀಟಿಗಳನ್ನು ಬಿಡುಗಡೆಗೊಳಿಸಿದ ಸಂದರ್ಭದ ಚಿತ್ರಗಳು.**



ಸಾರ್ವಜನಿಕ ಶಿಕ್ಷಣ ಇಲಾಖೆ ಆಯುಕ್ತರಾದ ಶ್ರೀ ಪಿ.ಸಿ. ಜಾಫರ್ ಮತ್ತು ಸರ್ವಶಿಕ್ಷಣ ಅಭಿಯಾನದ ರಾಜ್ಯ ಯೋಜನಾ ನಿರ್ದೇಶಕ ಡಾ॥ ಎಂ.ಟಿ. ರೇಜು ಹಾಗೂ ಪ್ರಾಥಮಿಕ ಶಿಕ್ಷಣ ನಿರ್ದೇಶಕರಾದ ಶ್ರೀ ಬಿ.ಕೆ. ಬಸವರಾಜ ಅವರೊಂದಿಗೆ ಶ್ರೀ ಚಿನ್ನಸ್ವಾಮಿರೆಡ್ಡಿ, ಶ್ರೀ ಕೆ. ಗಂಗಪ್ಪಗೌಡ, ಶ್ರೀಮತಿ ಎನ್.ಕೆ. ಛಾಯ, ಶ್ರೀಮತಿ ಸಿ. ಮಂಜುಳ, ರೋವರ್ಸ್ ಮತ್ತು ರೇಂಜರ್ಸ್‌ಗಳು.



ಸಾರ್ವಜನಿಕ ಶಿಕ್ಷಣ ಇಲಾಖೆಯ ಪ್ರೌಢಶಿಕ್ಷಣ ನಿರ್ದೇಶಕಿ ಶ್ರೀಮತಿ ಫಿಲೋಮಿನ ಲೊಬೊ ಅವರೊಂದಿಗೆ ಶ್ರೀ ಚಿನ್ನಸ್ವಾಮಿ ರೆಡ್ಡಿ, ಶ್ರೀ ಕೆ. ಗಂಗಪ್ಪಗೌಡ, ಶ್ರೀಮತಿ ಎನ್.ಕೆ. ಛಾಯಾ, ಶ್ರೀಮತಿ ಸಿ. ಮಂಜುಳ, ಶ್ರೀ ಹೀರೋಜಿರಾವ್ ಹಾಗು ಗೈಡ್.



.ಪ್ರೌಢ ಶಿಕ್ಷಣ ಪರೀಕ್ಷಾಮಂಡಳಿಯ ನಿರ್ದೇಶಕಿ ಶ್ರೀಮತಿ ವಿ. ಸುಮಂಗಲ ಅವರೊಡನೆ ಶ್ರೀ ಪ್ರಭುದೇವ ಜೆ. ಚಿಗಟೇರಿ, ಶ್ರೀ ಎಂ. ಪ್ರಭಾಕರ್ ಭಟ್ ಹಾಗೂ ರೋವರ್ಸ್-ರೇಂಜರ್ಸ್‌ಗಳು.



ಪ್ರೌಢಶಿಕ್ಷಣ ಪರಿಕ್ಷಾ ಮಂಡಳಿಯು ಜಂಟಿ ನಿರ್ದೇಶಕರಾದ ಶ್ರೀ ಡಿ.ಎಂ. ದಾನೋಜಿ ಅವರೊಂದಿಗೆ ಶ್ರೀ ಪ್ರಭುದೇವ ಜೆ. ಚಿಗಟೇರಿ, ಶ್ರೀ ಎಂ. ಪ್ರಭಾಕರ್ ಭಟ್ ಹಾಗೂ ರೋವರ್ಸ್-ರೇಂಜರ್ಸ್‌ಗಳು



ಪಠ್ಯಪುಸ್ತಕ ನಿರ್ದೇಶನಾಲಯದ ವ್ಯವಸ್ಥಾಪಕ ನಿರ್ದೇಶಕ ಶ್ರೀ ನರಸಿಂಹಯ್ಯ ಅವರೊಂದಿಗೆ ಶ್ರೀ ಚಿನ್ನಸ್ವಾಮಿರೆಡ್ಡಿ, ಶ್ರೀಮತಿ ಎನ್.ಕೆ. ಛಾಯ, ಶ್ರೀಮತಿ ಸಿ. ಮಂಜುಳ ಹಾಗೂ ರೋವರ್ಸ್-ರೇಂಜರ್ಸ್‌ಗಳು.



ಬೆಂಗಳೂರು ಗ್ರಾಮಾಂತರ ಜಿಲ್ಲೆ ಉಪನಿರ್ದೇಶಕರಾದ ಶ್ರೀ ಶೇಷಶಯನ ಕಾರಂಜಿ ಅವರೊಂದಿಗೆ ಶ್ರೀ ಚಿನ್ನಸ್ವಾಮಿ ರೆಡ್ಡಿ, ಶ್ರೀ ಕೆ. ಗಂಗಪ್ಪಗೌಡ, ಶ್ರೀಮತಿ ಎನ್.ಕೆ. ಛಾಯ, ಶ್ರೀಮತಿ ಸಿ. ಮಂಜುಳಾ, ಶ್ರೀ ಹಿರೋಜಿ ರಾವ್ ಹಾಗೂ ಸ್ಕೌಟ್ ಮತ್ತು ಗೈಡ್.

# ನವೆಂಬರ್ 07ರಂದು ರಾಜ್ಯದ ವಿವಿಧ ಜಿಲ್ಲಾ ಸಂಸ್ಥೆಗಳಲ್ಲಿ ಜರುಗಿದ "ಸಂಸ್ಥಾಪನಾ ದಿನಾಚರಣೆ ಮತ್ತು ಧ್ವಜ ಬಿಡುಗಡೆ" ಕಾರ್ಯಕ್ರಮಗಳ ವಿಹಂಗಮನೋಟ


ಉಡುಪಿ


ಕಾರವಾರ


ಚಿಕ್ಕಮಗಳೂರು


ಬಾಗಲಕೋಟೆ


ಬೀದರ್


ಮೈಸೂರು


ಕೊಪ್ಪಳ


ಮಂಡ್ಯ

## ನವೆಂಬರ್ 07ರಂದು ರಾಜ್ಯದ ವಿವಿಧ ಜಿಲ್ಲಾ ಸಂಸ್ಥೆಗಳಲ್ಲಿ ಜರುಗಿದ "ಸಂಸ್ಥಾಪನಾ ದಿನಾಚರಣೆ ಮತ್ತು ಧ್ವಜ ಬಿಡುಗಡೆ" ಕಾರ್ಯಕ್ರಮಗಳ ವಿಹಂಗಮನೋಟ


ತುಮಕೂರು


ಕೋಲಾರ


ಶಿವಮೊಗ್ಗ


ಬೆಂಗಳೂರು ದಕ್ಷಿಣ (ಆನೇಕಲ್)


ವಿಜಯಪುರ


ಬಳ್ಳಾರಿ


ಹಾವೇರಿ


ಗದಗ

Regd. as News Paper (Magazine) RNI No: 13348/1959. Postal Regd. No. KA/BGGPO/2580/2015-17
Licensed to Post Without Prepayment License WPP NO. 340, Date of Publishing 28th of Every
Posted at: Bengaluru PSO, Mysore Road, Bengaluru-26 on 28 or 30 every Month (No. of Pages: 44)



ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಜರುಗಿದ ಸ್ವಚ್ಛತಾ ಹಾಗೂ ಇತರ ಕಾರ್ಯಕ್ರಮಗಳು



























If not delivered, please return to :
THE EDITOR, Karnataka Scout & Guide
State Headquarters, Shanthi Gruha
#39, Palace Road, Bengaluru - 560 001
Ph.: 080-22260017
e-mail.: shq@bsgkarnataka.org
editor@bsgkarnataka.org
www.bsgkarnataka.org

Published by : The Bharat Scouts & Guides, Karnataka, State Headquarters
Shanthi Gruha, #39, Palace Road, Bengaluru - 560 001. Publisher & Editor : Siddaiah, IAS (Retd.)
Printed by : L. Lingappa, M.D. at Sathyasri Printers Pvt. Ltd., 16/1, 3rd Cross, 2nd Main, Kasturiba Nagar, Mysore Road, Bengaluru-26